| SL NO | APPL NO | REG NO | NAME | Gender | DOB | GRP | Rural | Kan Med | PDP | Phy Han | In Ser | SSLC Max Marks | SSLC Sec Marks | Dip Max Marks | Dip Sec Marks | Agg % age | Selected Flag |
|---|---|---|---|---|---|---|---|---|---|---|---|---|---|---|---|---|---|
| 80 | 56662 | L11579 | REKHAMANI K S | F | 10/05/1978 | 2A | R | Y | N | N | N | 625 | 404 | 1300 | 928 | 68.01 | AD_2A_R |
| 81 | 69891 | L1205 | MAITRADEVI KALASANNAVAR | F | 27/07/1980 | 2A | R | Y | N | N | Y | 625 | 388 | 1300 | 961 | 68 | AD_2A_R |
| 82 | 94196 | L3337 | NAYANA | F | 01/05/1983 | 2A | R | Y | N | N | N | 625 | 413 | 1300 | 909 | 68 | AD_2A_R |
| 83 | 56134 | L1446 | SEEMA NAIK | F | 12/07/1985 | 2A | R | Y | N | N | N | 625 | 425 | 1300 | 884 | 68 | AD_2A_R |
| 84 | 94282 | L2097 | SHWETHA | F | 18/09/1982 | 2A | R | Y | N | N | Y | 625 | 358 | 1300 | 1022 | 67.94 | AD_2A_K |
| 85 | 90084 | L1244 | RAJAMMA B S | F | 01/06/1984 | 2A | R | Y | N | N | N | 625 | 400 | 1300 | 934 | 67.92 | AD_2A_G |
| 86 | 68338 | L5297 | JYOTI PATIL | F | 24/12/1984 | 2A | U | Y | N | N | Y | 625 | 374 | 1300 | 988 | 67.92 | AD_2A_G |
| 87 | 95824 | L2165 | SHIVA M | M | 01/06/1986 | 2A | U | Y | N | N | N | 625 | 463 | 1300 | 803 | 67.92 | AD_2A_G |
| 88 | 91595 | L106 | DEEPASHREE | F | 30/10/1982 | 2A | R | N | N | N | N | 625 | 360 | 1300 | 1017 | 67.91 | AD_2A_G |
| 89 | 55479 | L12921 | MANGALA S | F | 27/06/1983 | 2A | R | Y | N | N | N | 625 | 395 | 1300 | 944 | 67.9 | AD_2A_G |
| 90 | 57650 | L8215 | SAVITHA K M | F | 26/06/1986 | 2A | R | Y | N | N | N | 625 | 431 | 1300 | 869 | 67.9 | AD_2A_G |
| 91 | 74427 | L3863 | SHILPA | F | 16/07/1984 | G1 | U | N | N | N | N | 625 | 376 | 1300 | 973 | 67.5 | AD_G1_W |
| 92 | 106866 | L11496 | HEMALATHA S | F | 25/03/1982 | G1 | R | Y | N | N | N | 625 | 370 | 1300 | 985 | 67.48 | AD_G1_W |
| 93 | 68091 | L824 | NATISHA KURLE | F | 10/09/1985 | G1 | U | Y | N | N | N | 625 | 422 | 1300 | 876 | 67.45 | AD_G1_G |
| 94 | 74105 | L10037 | MOHAMMED ABDUL QUDDUS | M | 23/04/1971 | G1 | U | N | N | N | N | 600 | 362 | 1300 | 969 | 67.43 | AD_G1_G |
| 95 | 82123 | L6022 | REKHAMMA | F | 12/06/1984 | G1 | R | Y | N | N | N | 625 | 416 | 1300 | 885 | 67.31 | AD_G1_R |
| 96 | 83505 | L9389 | SALMA CHOPDAR | F | 08/04/1987 | 2B | U | Y | N | N | N | 625 | 452 | 1300 | 807 | 67.19 | AD_2B_W |
| 97 | 60648 | L4620 | ASHA D | F | 10/06/1985 | G1 | R | Y | N | N | N | 625 | 422 | 1300 | 869 | 67.18 | AD_G1_R |
| 98 | 74952 | L2470 | BISMILLA BEGUM | F | 05/07/1975 | 2B | U | N | N | N | Y | 600 | 366 | 1300 | 953 | 67.15 | AD_2B_W |
| 99 | 67588 | L12919 | NASEEMA | F | 18/07/1972 | 2B | U | Y | N | N | Y | 600 | 359 | 1300 | 964 | 66.99 | AD_2B_G |

| SL NO | APPL NO | REG NO | NAME | Gender | DOB | GRP | Rural | Kan Med | PDP | Phy Han | In Ser | SSLC Max Marks | SSLC Sec Marks | Dip Max Marks | Dip Sec Marks | Agg % age | Selected Flag |
|---|---|---|---|---|---|---|---|---|---|---|---|---|---|---|---|---|---|
| 100 | 95888 | L8955 | SIRAJUNNISA K N | F | 22/09/1980 | 2B | U | Y | N | N | N | 625 | 365 | 1300 | 982 | 66.96 | AD_2B_G |
| 101 | 68514 | L3758 | SAJJADAHUSEN SHIRGUPPE | M | 19/05/1984 | 2B | R | N | N | N | N | 625 | 374 | 1300 | 950 | 66.45 | AD_2B_R |
| 102 | 58302 | L6258 | GULAJOHAN | F | 10/06/1981 | 2B | R | Y | N | N | Y | 625 | 371 | 1300 | 956 | 66.44 | AD_2B_R |
| 103 | 97541 | L1693 | HANUMANTHAPPA C | M | 08/02/1985 | ST | R | Y | N | N | N | 625 | 369 | 1300 | 952 | 66.13 | AD_ST_R |
| 104 | 101842 | L5334 | RENUKA | F | 26/10/1986 | ST | R | Y | N | N | Y | 625 | 357 | 1300 | 974 | 66.02 | AD_ST_W |
| 105 | 58211 | L12307 | PUSHPALATHA A K | F | 09/05/1984 | ST | U | Y | N | N | Y | 625 | 405 | 1300 | 874 | 66.01 | AD_ST_W |
| 106 | 88070 | L7059 | PURNIMA S | F | 21/05/1987 | ST | R | Y | N | N | N | 625 | 384 | 1300 | 917 | 65.98 | AD_ST_G |
| 107 | 98148 | L8303 | SWETHA T | F | 06/05/1984 | ST | U | Y | N | N | N | 625 | 369 | 1300 | 947 | 65.94 | AD_ST_G |
| 108 | 63324 | L5682 | RAVISING CHAVHAN | M | 04/06/1984 | SC | R | Y | N | N | N | 625 | 396 | 1300 | 878 | 65.44 | AD_SC_R |
| 109 | 86528 | L6543 | VASANTHKUMARI S | F | 15/06/1985 | SC | R | Y | N | N | Y | 625 | 380 | 1300 | 910 | 65.4 | AD_SC_W |
| 110 | 75217 | L4630 | ARATHI | F | 18/06/1986 | SC | R | Y | N | N | Y | 625 | 367 | 1300 | 937 | 65.39 | AD_SC_W |
| 111 | 116803 | L1606 | CHOWRAMMA | F | 01/01/1983 | SC | U | Y | N | N | N | 625 | 332 | 1300 | 1009 | 65.36 | AD_SC_W |
| 112 | 64323 | L4065 | SAVITRI BHAJANTRI | F | 02/03/1985 | SC | R | Y | N | N | Y | 625 | 377 | 1300 | 915 | 65.35 | AD_SC_W |
| 113 | 86919 | L13070 | LAKSHMI L | F | 08/06/1987 | SC | U | Y | N | N | N | 625 | 354 | 1900 | 1407 | 65.34 | AD_SC_W |
| 114 | 70492 | L12574 | MANJULA G S | F | 10/06/1984 | SC | U | Y | N | N | Y | 625 | 372 | 1300 | 925 | 65.33 | AD_SC_W |
| 115 | 78581 | L4951 | JYOTHI R | F | 05/04/1985 | SC | R | Y | N | N | Y | 625 | 410 | 1300 | 846 | 65.33 | AD_SC_W |
| 116 | 59565 | L13393 | LATHARANI N | F | 04/07/1982 | SC | U | Y | N | N | N | 625 | 366 | 1300 | 937 | 65.31 | AD_SC_K |
| 117 | 95878 | L9100 | RAMYA R | F | 26/01/1982 | SC | U | Y | N | N | N | 625 | 395 | 1300 | 876 | 65.29 | AD_SC_G |
| 118 | 90563 | L1981 | SHIVAKUMARA K C | M | 13/05/1985 | SC | R | Y | N | N | N | 625 | 392 | 1900 | 1289 | 65.28 | AD_SC_R |
| 119 | 89659 | L5355 | ASHWINI D.G | F | 08/07/1984 | SC | U | N | N | N | Y | 625 | 334 | 1300 | 1002 | 65.25 | AD_SC_G |
| 120 | 117349 | L1283 | RAVINDER | M | 01/06/1983 | SC | R | Y | N | N | N | 625 | 356 | 1300 | 956 | 65.24 | AD_SC_R |

| SL NO | APPL NO | REG NO | NAME | Gender | DOB | GRP | Rural | Kan Med | PDP | Phy Han | In Ser | SSLC Max Marks | SSLC Sec Marks | Dip Max Marks | Dip Sec Marks | Agg % age | Selected Flag |
|---|---|---|---|---|---|---|---|---|---|---|---|---|---|---|---|---|---|
| 121 | 79307 | L1638 | LALITHAMMA S | F | 10/08/1983 | SC | R | Y | N | N | Y | 625 | 406 | 1300 | 851 | 65.21 | AD_SC_R |
| 122 | 82761 | L4336 | MANGALAGOURI S | F | 20/05/1986 | SC | U | Y | N | N | Y | 625 | 345 | 1300 | 978 | 65.21 | AD_SC_G |
| 123 | 116931 | L6717 | RAMESH | M | 20/04/1987 | SC | R | Y | N | N | N | 625 | 366 | 1900 | 1365 | 65.2 | AD_SC_R |
| 124 | 73069 | L2845 | DEVENDRA | M | 10/06/1974 | SC | R | Y | N | N | Y | 600 | 332 | 1300 | 975 | 65.16 | AD_SC_G |
| 125 | 60449 | L12397 | NETHRAVATHI D | F | 21/09/1982 | SC | R | Y | N | N | Y | 625 | 355 | 1300 | 956 | 65.16 | AD_SC_G |
| 126 | 73772 | L10856 | KAVITHA G | F | 06/06/1983 | SC | U | Y | N | N | N | 625 | 326 | 1300 | 1016 | 65.15 | AD_SC_G |
| 127 | 62351 | L12872 | MAHANTESH | M | 20/07/1980 | GM | U | Y | Y | N | N | 625 | 366 | 1300 | 896 | 63.74 | AD_GM_PD |
| 128 | 69994 | L12942 | JAYASHRI KURI | F | 20/07/1982 | GM | U | Y | Y | N | Y | 625 | 320 | 1300 | 953 | 62.25 | AD_GM_PD |
| 129 | 54032 | L1828 | MRUTHUNJAYAPPA N | M | 13/06/1975 | 3B | R | N | Y | N | Y | 600 | 299 | 1300 | 962 | 61.91 | AD_GM_PD |
| 130 | 63345 | L3580 | CHANDRASHEKHAR KUMBALAVATI | M | 01/12/1978 | 2A | U | Y | Y | N | N | 625 | 353 | 1300 | 780 | 58.24 | AD_2A_PD |
| 131 | 62793 | L6096 | LAKSHMAN RAO BIDARI | M | 20/08/1972 | SC | R | Y | Y | N | N | 600 | 246 | 1300 | 962 | 57.5 | AD_SC_PD |
| 132 | 67972 | L9363 | TASANEEM ARABHAVI | F | 01/07/1983 | GM | R | Y | N | Y | Y | 625 | 246 | 1300 | 823 | 51.33 | AD_GM_PH |

**ಈ ಅಭ್ಯರ್ಥಿಗಳ ಆಯ್ಕೆಯು ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗಳಿಗೆ ಒಳಪಟ್ಟಿರುತ್ತದೆ:**

1) ಈ ಆಯ್ಕೆಪಟ್ಟಿಯಲ್ಲಿ ಅಭ್ಯರ್ಥಿಗಳ ಹೆಸರನ್ನು ಸೇರಿಸಿರುವ ಕಾರಣದಿಂದಾಗಿ ಯಾವುದೇ ಅಭ್ಯರ್ಥಿಗೆ ನೇಮಕಾತಿ ಹಕ್ಕು ಪ್ರಾಪ್ತವಾಗುವುದಿಲ್ಲ.
2) ಮುಖ್ಯಪಟ್ಟಿಯಲ್ಲಿ ಆಯ್ಕೆಯಾದ ಅಭ್ಯರ್ಥಿಗಳಲ್ಲಿ ಯಾವುದೇ ಅಭ್ಯರ್ಥಿಯು ಕರ್ತವ್ಯಕ್ಕೆ ವರದಿ ಮಾಡಿಕೊಳ್ಳದಿದ್ದ ಪಕ್ಷದಲ್ಲಿ ಅದೇ ಮೀಸಲಾತಿಯಡಿಯಲ್ಲಿ ಹೆಚ್ಚುವರಿ ಪಟ್ಟಿಯಲ್ಲಿ ಸ್ಥಾನ ಹೊಂದಿರುವ ಅಭ್ಯರ್ಥಿಯನ್ನು ನೇಮಕಾತಿಗೆ ಪರಿಗಣಿಸುವ ಸಲುವಾಗಿ ಮಾತ್ರ ಹೆಚ್ಚುವರಿ ಪಟ್ಟಿಯನ್ನು ಪ್ರಕಟಿಸಲಾಗಿದ್ದು, ಹೆಚ್ಚುವರಿ ಪಟ್ಟಿಯಲ್ಲಿ ಸ್ಥಾನಪಡೆದ ಮಾತ್ರಕ್ಕೆ ಅಭ್ಯರ್ಥಿಗಳಿಗೆ ನೇಮಕಾತಿ ಹಕ್ಕು ಪ್ರಾಪ್ತವಾಗುವುದಿಲ್ಲ.
3) ಅಭ್ಯರ್ಥಿಗಳ ಆಯ್ಕೆಯು ನ್ಯಾಯಾಲಯದಲ್ಲಿ ಹೂಡಲಾಗಿರುವ/ ಹೂಡಲಾಗುವ ಪ್ರಕರಣಗಳಲ್ಲಿನ ತೀರ್ಪಿನನ್ವಯ ಪುನರ್‌ವಿಲೋಕನೆಗೆ ಒಳಪಡಿಸುವ ಹಾಗೂ ಅನರ್ಹ ಅಭ್ಯರ್ಥಿಗಳ ಆಯ್ಕೆಯನ್ನು ರದ್ದುಗೊಳಿಸುವ ನಿಬಂಧನೆ ಮತ್ತು ಷರತ್ತುಗಳಿಗೆ ಒಳಪಟ್ಟಿರುತ್ತದೆ.
4) ಮೀಸಲಾತಿಯಡಿಯಲ್ಲಿ ಆಯ್ಕೆಗಾಗಿ ಪರಿಗಣಿಸಲಾಗಿರುವ ಅಭ್ಯರ್ಥಿಗಳು ಸಲ್ಲಿಸಿರುವ ಪ್ರಮಾಣ ಪತ್ರಗಳ ಪರಿಶೀಲನೆಯಲ್ಲಿ ಯಾವುದೇ ಪ್ರಮಾಣ ಪತ್ರ ನಮೂದಿಸಿದ ಅಂಶಗಳು ವ್ಯತಿರಿಕ್ತವಾಗಿದ್ದಲ್ಲಿ, ಅಂತಹ ಅಭ್ಯರ್ಥಿಗಳ ಆಯ್ಕೆಯನ್ನು ಪುನರ್ ಪರಿಶೀಲಿಸಿ, ಆಯ್ಕೆಯನ್ನು ರದ್ದುಗೊಳಿಸಲಾಗುವುದು.
5) ಅಭ್ಯರ್ಥಿಗಳು ಸಲ್ಲಿಸಿರುವ ಅಂಕಪಟ್ಟಿಗಳನ್ನು ವಿಶ್ವವಿದ್ಯಾಲಯದ ಪರಿಶೀಲನೆಗೆ ಒಳಪಡಿಸಲಾಗುವುದು. ಯಾವುದೇ ಅಭ್ಯಥಿಯು ಸಲ್ಲಿಸಿರುವ ಅಂಕಪಟ್ಟಿಗಳ ನೈಜತೆಯ ಬಗ್ಗೆ ವ್ಯತಿರಿಕ್ತ ವರದಿ ಸ್ವೀಕೃತವಾದಲ್ಲಿ, ಅಂತಹ ಅಭ್ಯರ್ಥಿಯ ಆಯ್ಕೆಯನ್ನು ಪುನರ್ ಪರಿಶೀಲಿಸಿ, ರದ್ದುಗೊಳಿಸಲಾಗುವುದು.
6) ಅಂತಿಮ ಆಯ್ಕೆಪಟ್ಟಿಯಲ್ಲಿರುವ ಅಭ್ಯರ್ಥಿಗಳ ನೇಮಕಾತಿಯು ಜಾತಿ/ಆದಾಯ/ ಸಿಂಧುತ್ವ ಪ್ರಮಾಣ ಪತ್ರಗಳು/ ವೈದ್ಯಕೀಯ ಪರಿಶೀಲನಾ ವರದಿಗಳು/ ಆರಕ್ಷಕ ವಿಚಾರಣಾ ವರದಿಗಳ ಸ್ವೀಕೃತಿ/ ಪರಿಶೀಲನೆಯ ನಿಬಂಧನೆಗೆ ಒಳಪಟ್ಟಿರುತ್ತದೆ. ಎಲ್ಲಾ ಅಗತ್ಯ ವರದಿಗಳು ಸ್ವೀಕೃತವಾಗಿ ಅಂಗೀಕೃತವಾಗದೆ ಯಾವುದೇ ಅಭ್ಯರ್ಥಿಗೆ ನೇಮಕಾತಿ ಹಕ್ಕು ಪ್ರಾಪ್ತವಾಗುವುದಿಲ್ಲ.

ಸಹಿ/–

ಸದಸ್ಯ ಕಾರ್ಯದರ್ಶಿ,

ವಿಶೇಷ ನೇಮಕಾತಿ ಸಮಿತಿ ಹಾಗೂ ಮುಖ್ಯ ಆಡಳಿತಾಧಿಕಾರಿಗಳು,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ಸೇವೆಗಳು.

ಪಿಡಿ–146

**ಪಶುಪಾಲನಾ ಮತ್ತು ಪಶುವೈದ್ಯಕೀಯ ಸೇವಾ ಇಲಾಖೆ**

**ಉಪ ನಿರ್ದೇಶಕರವರ ಕಛೇರಿ, ಅಮೃತ್ ಮಹಲ್ ತಳಿ ಸಂವರ್ಧನಾ ಕೇಂದ್ರ, ಅಜ್ಜಂಪುರ**

**ಪ್ರಕಟಣೆ ಸಂಖ್ಯೆ: ಉಪನಿ/ಅಮತಸಂಕೇ/ಅಮಕಾ/ಹರಾಜು/2010-11, ದಿನಾಂಕ:18ನೇ ಡಿಸೆಂಬರ್, 2010**

ಈ ಮೂಲಕ ಸಮಸ್ತ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಅಜ್ಜಂಪುರ ಕೇಂದ್ರ ಮತ್ತು ಉಪಕೇಂದ್ರಗಳಿಗೆ ಸೇರಿದ ಅಮೃತ್ ಮಹಲ್ ಗಂಡು ಕರುಗಳನ್ನು ಬಹಿರಂಗ ಹರಾಜಿನ ಮೂಲಕ ಮಾರಾಟ ಮಾಡಲಾಗುವುದು.

ಆಸಕ್ತಿಯುಳ್ಳವರು ರೂ.5,000/- ಠೇವಣಿ ಹಣಕಟ್ಟಿ ಹರಾಜಿನಲ್ಲಿ ಭಾಗವಹಿಸಬಹುದು. ವಿವರ ಈ ಕೆಳಕಂಡಂತೆ ಇದೆ.

| ಕ್ರ.ಸಂ. | ಹರಾಜು ನಡೆಯುವ ಸ್ಥಳ | ಹರಾಜಿನ ದಿನ | ಹರಾಜು ಮಾಡಲು ಉದ್ದೇಶಿಸಿರುವ ಕರುಗಳ ಸಂಖ್ಯೆ |
|---|---|---|---|
| 1. | ಬಿದರಮ್ಮನಗುಡಿ ಅಮೃತ್ ಮಹಲ್ ಕಾವಲು, ಕೊನೇಹಳ್ಳಿ, ಹೊನ್ನವಳ್ಳಿ ರೋಡ್, ರೈಲ್ವೇನಿಲ್ದಾಣ ಸಮೀಪ, ತಿಪಟೂರು ತಾಲ್ಲೂಕು. | ದಿನಾಂಕ:19.01.2011ರ ಬುಧವಾರ ಬೆಳಿಗ್ಗೆ 11.30 ಗಂಟೆಗೆ | 38 ಅಮೃತ್ ಮಹಲ್ ಗಂಡು ಕರುಗಳು |
| 2. | ಜಾನುವಾರು ಸಂವರ್ಧನಾ ಕ್ಷೇತ್ರ, ಬೀರೂರು, ಅಮೃತ್ ಮಹಲ್ ಕಾವಲು, (ಕಡೂರು ಬೀರೂರು ಮಧ್ಯೆ) | ದಿನಾಂಕ:27.01.2011ರ ಗುರುವಾರ ಬೆಳಿಗ್ಗೆ 11.30 ಗಂಟೆಗೆ | 24 ಅಮೃತ್ ಮಹಲ್ ಗಂಡು ಕರುಗಳು |

ಷರತ್ತು ಮತ್ತು ನಿಬಂಧನೆಗಳಿಗೆ ಈ ಕೆಳಗೆ ಸಹಿ ಮಾಡಿರುವ ಅಧಿಕಾರಿಯವರನ್ನು ಕಛೇರಿ ವೇಳೆಯಲ್ಲಿ ಸಂಪರ್ಕಿಸಬಹುದು. ದೂರವಾಣಿ ಸಂಖ್ಯೆ:08261-245122.

ಉಪ ನಿರ್ದೇಶಕರು,
ಅಮೃತ್ ಮಹಲ್ ತಳಿ ಸಂವರ್ಧನಾ ಕೇಂದ್ರ,
ಅಜ್ಜಂಪುರ, ತರೀಕೆರೆ ತಾಲ್ಲೂಕು.

ಪಿ.ಆರ್.806

**ಉಪ ಅರಣ್ಯ ಸಂರಕ್ಷಣಾಧಿಕಾರಿಯವರು, ಕೋಲಾರ ಅರಣ್ಯ ವಿಭಾಗ, ಕೋಲಾರ**

**ಸಂಕ್ಷಿಪ್ತ ಹರಾಜು ಪ್ರಕಟಣೆ**

**ಸಂಖ್ಯೆ: ಎ7.ಎಸ್ಎಎಸ್.ಸಿಆರ್.105/2010-11, ದಿನಾಂಕ:6ನೇ ಡಿಸೆಂಬರ್, 2010**

ಈ ಮೂಲಕ ಸಮಸ್ತ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಕೋಲಾರ ಅರಣ್ಯ ವಿಭಾಗದ ಮಾಲೂರು ವಲಯದ ಲಕ್ಷ್ಮಿಸಾಗರ ಅರಣ್ಯ ಪ್ರದೇಶದಲ್ಲಿ ಕರಿನಾಯಕನಹಳ್ಳಿ ಸ.ನಂ.68ರ ನೆಡುತೋಪಿನಲ್ಲಿ ಕೆ.ಎಸ್.ಎಫ್.ಐ.ಸಿ. ಬೆಂಗಳೂರು ರವರು ಕಠಾವಣೆ ಮಾಡಿ ಕೋಲಾರದ ಗಾಜಲದಿನ್ನೆ ಟೆಂಕೆ ಡಿಪೋಗೆ ಸಾಗಾಣಿಕೆ ಮಾಡಿರುವ ಅಂದಾಜು 189 ಘ.ಮೀ. ನೀಲಗಿರಿ ನಾಟಾ ಮತ್ತು 12000 ಸಂಖ್ಯೆ ನೀಲಗಿರಿ ಪೋಲ್ಸ್‌ಗಳನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಯವರು ಅಥವಾ ಅವರಿಂದ ನಿಯೋಜಿಸಲ್ಪಟ್ಟ ಅಧಿಕಾರಿಗಳಿಂದ ದಿನಾಂಕ:10.01.2011, 11.01.2011 ಮತ್ತು 12.01.2011ರ ಬೆಳಿಗ್ಗೆ 11.00 ಗಂಟೆಗೆ ಅವುಗಳು ದಾಸ್ತಾನಿರುವ ಸ್ಥಳದಲ್ಲಿ ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡಲಾಗುವುದು.

ಮುಂಗಡ ಠೇವಣಿ ಸ್ವತ್ತಿನ ಮೌಲ್ಯ 20,000-00 ರೂ.ವರೆಗೆ 5,000-00 ರೂ., ಮೀರಿದಲ್ಲಿ ರೂ.20,000-00. ಹರಾಜು ಮುಗಿದ ಕೂಡಲೇ ಶೇಕಡಾ 50ರಷ್ಟು ಹಣ ಮತ್ತು ಪೂರ್ತಿ ತೆರಿಗೆಗಳನ್ನು ಅದೇ ದಿನ ಹರಾಜು ನಡೆದ ಸ್ಥಳದಲ್ಲಿಯೇ ಪಾವತಿಸುವುದು. ಉಳಿಕೆ ಶೇ.50ರಷ್ಟನ್ನು ಮಾರಾಟ ದೃಢೀಕರಿಸಿದ 7 ದಿನಗಳೊಳಗೆ ಪಾವತಿಸುವುದು. ಹರಾಜಿಗೆ ಸಂಬಂಧಿಸಿದ ಎಲ್ಲಾ ಹಕ್ಕು ಅರಣ್ಯ ಇಲಾಖೆ ಪ್ರಾಧಿಕಾರವುಳ್ಳ ಅಧಿಕಾರಿಗಳಲ್ಲಿರುತ್ತದೆ. ಹೆಚ್ಚಿನ ವಿವರ ಮತ್ತು ಷರತ್ತುಗಳಿಗೆ ಈ ಕಛೇರಿಯ ವೇಳೆಯಲ್ಲಿ ಸಂಪರ್ಕಿಸುವುದು.

ಉಪ ಅರಣ್ಯ ಸಂರಕ್ಷಣಾಧಿಕಾರಿ,
ಕೋಲಾರ ವಿಭಾಗ, ಕೋಲಾರ.

ಪಿ.ಆರ್.807

**ಉಪ ಅರಣ್ಯ ಸಂರಕ್ಷಣಾಧಿಕಾರಿಯವರು, ಕೋಲಾರ ಅರಣ್ಯ ವಿಭಾಗ, ಕೋಲಾರ**

**ಸಂಕ್ಷಿಪ್ತ ಹರಾಜು ಪ್ರಕಟಣೆ**

**ಸಂಖ್ಯೆ: ಎ7.ಎಸ್ಎಎಸ್.ಸಿಆರ್.108/2010-11, ದಿನಾಂಕ:6ನೇ ಡಿಸೆಂಬರ್, 2010**

ಈ ಮೂಲಕ ಸಮಸ್ತ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಕೋಲಾರ ಅರಣ್ಯ ವಿಭಾಗದ ಕೆಳಕಂಡ ವಲಯದಲ್ಲಿ ಅರಣ್ಯ ನೆಡುತೋಪು ಕಠಾವಣೆ ಮಾಡಿ ತಯಾರಿಸಿದ ನೀಲಗಿರಿ ನಾಟಾ, ಅಕೇಶಿಯಾ ನಾಟಾ ಲಾಟುಗಳನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಯವರು ಅಥವಾ ಅವರಿಂದ ನಿಯೋಜಿಸಲ್ಪಟ್ಟ ಅಧಿಕಾರಿಗಳಿಂದ ಈ ಕೆಳಕಂಡ ದಿನಾಂಕಗಳಂದು ಅವುಗಳು ದಾಸ್ತಾನಿರುವ ಸ್ಥಳದಲ್ಲಿ ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡಲಾಗುವುದು. ಹೆಚ್ಚಿನ ವಿವರಗಳಿಗೆ ಈ ಕಛೇರಿ ವೇಳೆಯಲ್ಲಿ ಸಂಪರ್ಕಿಸುವುದು.

| ಕ್ರ ಸಂ. | ನಾಟಾ ಸಂಗ್ರಹಾಲಯದ ಹೆಸರು | ಹರಾಜಿನ ದಿನಾಂಕ ಮತ್ತು ಸಮಯ | ಹರಾಜು ಮಾಡುವ ಉತ್ಪನ್ನಗಳ ವಿವರ (ಘನ ಮೀಟರ್‌ಗಳಲ್ಲಿ) |
|---|---|---|---|
| 1. | ಕೋಲಾರದ ಗಾಜಲದಿನ್ನೆ ಸಸ್ಯಕ್ಷೇತ್ರ ಟೆಂಕೆ ಡಿಪೋ | ದಿನಾಂಕ:17.01.2011, 18.01.2011 ಬೆಳಿಗ್ಗೆ 11.00 ಗಂಟೆಗೆ | 375 ಘ.ಮೀ. ನೀಲಗಿರಿ ನಾಟಾ |

| | | | |
|---|---|---|---|
| 2. | ಬಂಗಾರಪೇಟೆ ವಲಯ ಅರಣ್ಯಾಧಿಕಾರಿಯವರ ಕಛೇರಿ ಆವರಣ, ಕಾರಬೆಲೆ ಸಸ್ಯಕ್ಷೇತ್ರ | ದಿನಾಂಕ:19.01.2011 ಬೆಳಿಗ್ಗೆ 11.00 ಗಂಟೆಗೆ | 25.00 ಘ.ಮೀ. ಅಕೇಶಿಯಾ ನಾಟಾ |
| 3. | ಮುಳಬಾಗಿಲು ವಲಯ ಅರಣ್ಯಾಧಿಕಾರಿಯವರ ಕಛೇರಿ ಆವರಣ, ಮುಳಬಾಗಿಲು | ದಿನಾಂಕ:19.01.2011 ಮಧ್ಯಾಹ್ನ 3.30 ಗಂಟೆಗೆ | 91.00 ಘ.ಮೀ. ನೀಲಗಿರಿ ನಾಟಾ |
| 4. | ಶ್ರೀನಿವಾಸಪುರ ಅರಣ್ಯ ಪ್ರದೇಶದ ಟೆಂಕೆ ಡಿಪೋ | ದಿನಾಂಕ:20.01.2011 ಬೆಳಿಗ್ಗೆ 11.00 ಗಂಟೆಗೆ | 8.00 ಘ.ಮೀ. ಅಕೇಶಿಯಾ ನಾಟಾ |

ಮುಂಗಡ ಠೇವಣಿ ಕನಿಷ್ಠ ರೂ.20000–00 ಹರಾಜಿನಲ್ಲಿ ಭಾಗವಹಿಸುವ ಮೊದಲೇ ಪಾವತಿಸುವುದು ಹರಾಜು ಸ್ವತ್ತಿನ ಬೆಲೆ ರೂ.20000–00 ಮೀರಿದಲ್ಲಿ ಪುನಃ ರೂ.20000–00 ಮುಂಗಡ ಠೇವಣಿ ಹಣವನ್ನು ಪಾವತಿಸುವುದು, ಹರಾಜು ಮುಗಿದ ಕೂಡಲೇ ಶೇಕಡಾ 50ರಷ್ಟು ಹಣ ಮತ್ತು ಪೂರ್ತಿ ತೆರಿಗೆಗಳನ್ನು ಅದೇ ದಿನ ಹರಾಜು ನಡೆದ ಸ್ಥಳದಲ್ಲಿಯೇ ಪಾವತಿಸುವುದು. ಉಳಿಕೆ ಶೇಕಡಾ 50ರಷ್ಟನ್ನು ಮಾರಾಟ ದೃಢೀಕರಿಸಿದ 7 ದಿನಗಳೊಳಗೆ ಪಾವತಿಸುವುದು. ಮುಂಗಡ ಠೇವಣಿ ಹಣವನ್ನು ಎರಡನೇ ಮತ್ತು ಅಂತಿಮ ಕಂತಾಗಿ ನೀಡುವ ಶೇ.50ರ ಬಾಕಿ ಮೊಬಲಗಿಗೆ ಹೊಂದಾಣಿಕೆ ಮಾಡಿಕೊಳ್ಳಲಾಗುವುದು. ಹರಾಜಿಗೆ ಸಂಬಂಧಿಸಿದ ಎಲ್ಲಾ ಹಕ್ಕು ಅರಣ್ಯ ಇಲಾಖೆ ಪ್ರಾಧಿಕಾರವುಳ್ಳ ಅಧಿಕಾರಿಗಳಲ್ಲಿರುತ್ತದೆ. ಹೆಚ್ಚಿನ ವಿವರ ಮತ್ತು ಷರತ್ತುಗಳಿಗೆ ಈ ಕಛೇರಿಯ ವೇಳೆಯಲ್ಲಿ ಸಂಪರ್ಕಿಸುವುದು.

ಉಪ ಅರಣ್ಯ ಸಂರಕ್ಷಣಾಧಿಕಾರಿ,
ಕೋಲಾರ ವಿಭಾಗ, ಕೋಲಾರ.

ಪಿ.ಆರ್.808

**ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ಸಾಮಾಜಿಕ ಅರಣ್ಯ ಸಂಶೋಧನೆ, ಅರೆಕೆರೆ ಮೈಕೋ ಲೇಔಟ್, ಬನ್ನೇರುಘಟ್ಟ ರಸ್ತೆ, ದೊರೆಸಾನಿಪಾಳ್ಯ, ಬೆಂಗಳೂರು–560 076**

**ಹರಾಜು ಪ್ರಕಟಣೆ**

**ಸಂಖ್ಯೆ: ಉಅಸಂ/ಸಾಅಸಂ/ಸೇಲ್ಸ್/2010–11, ದಿನಾಂಕ:23ನೇ ಡಿಸೆಂಬರ್, 2010**

**ವಿಷಯ:** ಬೆಂಗಳೂರು ಬೀಜಾಭಿವೃದ್ಧಿ ವಲಯದ ದೊರೆಸಾನಿಪಾಳ್ಯ ಸಂಶೋಧನಾ ಕೇಂದ್ರದಲ್ಲಿ ಒಂದು ಸೀಡ್ ಸಪರೇಟರ್ ನಿರುಪಯುಕ್ತ ಯಂತ್ರವನ್ನು ಹರಾಜಿನ ಮೂಲಕ ವಿಲೇವಾರಿ ಮಾಡುವ ಬಗ್ಗೆ.

ಈ ಮೂಲಕ ಸಮಸ್ತ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ ಈ ವಿಭಾಗದ ಬೆಂಗಳೂರು ಬೀಜಾಭಿವೃದ್ಧಿ ವಲಯದ ದೊರೆಸಾನಿಪಾಳ್ಯ ಕೇಂದ್ರದಲ್ಲಿ ಒಂದು ಸೀಡ್ ಸಪರೇಟರ್ ನಿರುಪಯುಕ್ತ ಯಂತ್ರವನ್ನು ದಿನಾಂಕ:29.01.2011 ರಂದು ಬೆಳಿಗ್ಗೆ 11.00 ಗಂಟೆಗೆ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಸಾಮಾಜಿಕ ಅರಣ್ಯ ಸಂಶೋಧನೆ, ಬೆಂಗಳೂರು ಇವರು ಅಥವಾ ಇವರಿಂದ ಅಧಿಕಾರ ಪಡೆದ ಅಧಿಕಾರಿಗಳು ಈ ಪ್ರಕಟಣೆಯಲ್ಲಿರುವ ಷರತ್ತುಗಳಿಗನುಗುಣವಾಗಿ ಕೆಳಗಿನ ತಪ್ಸೀಲಿನಲ್ಲಿ ಸೂಚಿಸಿರುವ ಪ್ರಕಾರ ಬಹಿರಂಗ ಹರಾಜಿನ ಮೂಲಕ ದಿನಾಂಕ:29.01.2011 ರಂದು ಮಾರಾಟ ಮಾಡುವರು. ಸದರಿ ದಿನಾಂಕದಂದು ಕಾರಣಾಂತರದಿಂದ ಹರಾಜು ನಡೆಯದಿದ್ದರೆ ಇದೇ ಪ್ರಕಟಣೆಯ ಷರತ್ತಿಗೆ ಒಳಪಟ್ಟು ದಿನಾಂಕ:31.01.2011 ರಂದು ಬೆಳಿಗ್ಗೆ 11.00 ಗಂಟೆಗೆ ಎರಡನೇ ಬಾರಿಗೆ ಮಾರಾಟ ಮಾಡುವರು. ಇಚ್ಛೆಯುಳ್ಳವರು ಭಾಗವಹಿಸಿ ಪಡೆಯಬಹುದು.

**ತಪ್ಸೀಲು**

| ಕ್ರಮ ಸಂಖ್ಯೆ | ವಿವರ | ಮಾರಾಟ ಮಾಡುವ ಸ್ಥಳ | ಹರಾಜಿನ ದಿನಾಂಕ ಮತ್ತು ವೇಳೆ | ಹರಾಜಿನಲ್ಲಿ ಭಾಗವಹಿಸುವವರು ಕಟ್ಟಬೇಕಾದ ಠೇವಣಿ ಹಣ |
|---|---|---|---|---|
| 1 | 2 | 3 | 4 | 5 |
| 1. | ಸೀಡ್ ಸಪರೇಟರ್ ನಿರುಪಯುಕ್ತ ಯಂತ್ರ | ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ಸಾಮಾಜಿಕ ಅರಣ್ಯ ಸಂಶೋಧನೆ, ಅರೆಕೆರೆ ಮೈಕೋ ಲೇಔಟ್, ಬನ್ನೇರುಘಟ್ಟ ರಸ್ತೆ, ದೊರೆಸಾನಿಪಾಳ್ಯ, ಬೆಂಗಳೂರು–560 076 | ದಿನಾಂಕ:29.01.2011 ರಂದು ಬೆಳಿಗ್ಗೆ 11.00 ಗಂಟೆಗೆ | ಹರಾಜಿನಲ್ಲಿ ಭಾಗವಹಿಸುವವರು ರೂ.3,000/– (ಮೂರು ಸಾವಿರ ಮಾತ್ರ) ನಗದು ಹಣವನ್ನು ಹರಾಜಿಗೆ ಮುಂಚಿತವಾಗಿ ಪಾವತಿಸುವುದು. |

ಹೆಚ್ಚಿನ ಮಾಹಿತಿಯನ್ನು ಕಛೇರಿ ಕೆಲಸದ ವೇಳೆಯಲ್ಲಿ ಸಂಪರ್ಕಿಸಿ ಪಡೆಯಬಹುದು.

ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಮಾಜಿಕ ಅರಣ್ಯ ಸಂಶೋಧನೆ, ಬೆಂಗಳೂರು.

ಪಿ.ಆರ್.809

**ಕರ್ನಾಟಕ ಸರ್ಕಾರ**

**ನೋಂದಣಿ ಮತ್ತು ಮುದ್ರಾಂಕ ಇಲಾಖೆ**

**ನೇಮಕಾತಿ ಆದೇಶ**

**ವಿಷಯ:** ನೋಂದಣಿ ಮತ್ತು ಮುದ್ರಾಂಕ ಇಲಾಖೆಯಲ್ಲಿನ ಜವಾನರ (ಡಿ–ಗ್ರೂಪ್) ಬ್ಯಾಕ್‌ಲಾಗ್ ಹುದ್ದೆಗಳಲ್ಲಿ ಅಭ್ಯರ್ಥಿಗಳನ್ನು ನೇಮಕ ಮಾಡಿಕೊಳ್ಳುವ ಬಗ್ಗೆ.

**ಉಲ್ಲೇಖ:**1) ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 13 ಎಸ್‌ಬಿಸಿ 2001 ದಿನಾಂಕ:21.11.2001 ರನ್ವಯ ಪ್ರಕಟಿಸಿರುವ ಬ್ಯಾಕ್‌ಲಾಗ್ ನೇಮಕಾತಿ ನಿಯಮಗಳು 2001 (ದಿನಾಂಕ:22.11.2001 ರಂದು ಕರ್ನಾಟಕ ವಿಶೇಷ ರಾಜ್ಯಪತ್ರದಲ್ಲಿ ಪ್ರಕಟವಾಗಿದೆ)

2) ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಅವರ ಅಲಾಟ್‌ಮೆಂಟ್ ಆದೇಶ ಸಂಖ್ಯೆ: EST–2–235/2003–04 ದಿನಾಂಕ:21.09.2010.

**ಪ್ರಸ್ತಾವನೆ:**

ಈ ಇಲಾಖೆಯ ಬಳ್ಳಾರಿ ಜಿಲ್ಲೆಯಲ್ಲಿ (ಡಿ–ಗ್ರೂಪ್) ಜವಾನರ ವೃಂದದಲ್ಲಿ ಕೆಳಕಂಡಂತೆ ಬ್ಯಾಕ್‌ಲಾಗ್ ಹುದ್ದೆಗಳನ್ನು ಗುರುತಿಸಿ ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ಬೆಂಗಳೂರು ಇವರಿಗೆ ವರದಿ ಮಾಡಲಾಗಿತ್ತು.

| ಕ್ರ.ಸಂ. | ಜಿಲ್ಲೆ | ಸದರಿ ಜಿಲ್ಲೆಯಲ್ಲಿ ಗುರುತಿಸಲ್ಪಟ್ಟ ಬ್ಯಾಕ್‌ಲಾಗ್ ಹುದ್ದೆಗಳ ಸಂಖ್ಯೆ | | |
|---|---|---|---|---|
| | | ಪರಿಶಿಷ್ಟ ಜಾತಿ | ಪರಿಶಿಷ್ಟ ಪಂಗಡ | ಒಟ್ಟು |
| 1. | ಬಳ್ಳಾರಿ ಜಿಲ್ಲೆ | ಒಂದು | ಇಲ್ಲ | ಒಂದು |

ಮೇಲೆ ಗುರುತಿಸಿದ ಬ್ಯಾಕ್‌ಲಾಗ್ ಹುದ್ದೆಗಳಲ್ಲಿ ನೇಮಕಾತಿ ಮಾಡಿಕೊಳ್ಳುವುದಕ್ಕಾಗಿ ಕೆಳಕಂಡ ಅಭ್ಯರ್ಥಿಯನ್ನು ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರು ಅವರ ಉಲ್ಲೇಖ (2)ರ ಅಲಾಟ್‌ಮೆಂಟ್ ಆದೇಶದಲ್ಲಿ ಈ ಜಿಲ್ಲೆಗೆ ಅಲಾಟ್ ಮಾಡಿ ಕೆಳಕಂಡ ಅಭ್ಯರ್ಥಿಯನ್ನು ಈ ಜಿಲ್ಲೆಯಲ್ಲಿ ಜವಾನರೆಂದು ನೇಮಕ ಮಾಡಿಕೊಳ್ಳುವಂತೆ ನಿರ್ದೇಶಿಸಿದ್ದರ ಮೇರೆಗೆ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ: ಸಿಬ್ಬಂದಿ/31/2010–11, ದಿನಾಂಕ:21ನೇ ಡಿಸೆಂಬರ್, 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಹಾಗೂ ಉಲ್ಲೇಖ (1)ರ ಬ್ಯಾಕ್‌ಲಾಗ್ ನಿಯಮಗಳನ್ವಯ ಪ್ರದತ್ತವಾದ ಅಧಿಕಾರದ ಮೇರೆಗೆ ಉಲ್ಲೇಖ (2)ರಲ್ಲಿನ ಅಲಾಟ್‌ಮೆಂಟ್ ಆದೇಶದಲ್ಲಿ ಕಂಡುಬಂದ ಕೆಳಕಂಡ ಬ್ಯಾಕ್‌ಲಾಗ್ ಅಭ್ಯರ್ಥಿಯನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಬಳ್ಳಾರಿ ಜಿಲ್ಲೆಯಲ್ಲಿ ಖಾಲಿ ಇರುವ ಜವಾನರ ಹುದ್ದೆಯಲ್ಲಿ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ರೂ.4800–100–6000–125–6500–150–7100–175–7275ರ ವೇತನ ಶ್ರೇಣಿಯಲ್ಲಿ ತಾತ್ಕಾಲಿಕವಾಗಿ ಜವಾನರೆಂದು ನೇಮಕ ಮಾಡಲಾಗಿದೆ. ಹಾಗೂ ಕೆಳಕಂಡ ಅಭ್ಯರ್ಥಿಯನ್ನು ಅವರ ಹೆಸರಿನ ಮುಂದೆ ಸೂಚಿಸಿರುವ ಕಛೇರಿಗೆ ಜವಾನರೆಂದು ಸ್ಥಳ ನಿಯುಕ್ತಿಗೊಳಿಸಿದೆ.

| ಕ್ರ. ಸಂ. | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | SC / ST | ಜನ್ಮ ದಿನಾಂಕ | 3–7–2004ರ ಅಂತ್ಯಕ್ಕೆ ಅಭ್ಯರ್ಥಿಯ ವಯಸ್ಸು ವ–ತಿಂ–ದಿ | ವಿದ್ಯಾರ್ಹತೆ ಮತ್ತು ಶೇಕಡವಾರು ಅಂಕಗಳು | ಅಭ್ಯರ್ಥಿಯನ್ನು ಜವಾನರೆಂದು ನೇಮಕ ಮಾಡಿದ ಕಛೇರಿ | ಅಭ್ಯರ್ಥಿಯನ್ನು ಯಾವ ಮೀಸಲಾತಿ ಅಡಿಯಲ್ಲಿ ಮತ್ತು ಯಾವ ವರ್ಗೀಕರಣದ ಅಡಿಯಲ್ಲಿ ನೇಮಕ ಮಾಡಲಾಗಿದೆಯೋ ಅದರ ವಿವರ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1. | ಜೆ. ತಿಪ್ಪೇಸ್ವಾಮಿ S/o ಎ.ಕೆ. ಜಯಪ್ಪ ಸಾಸಲು, ಟಿ.ಬಿ.ನಗರ ಅಂಚೆ, ಬಿ–ದುರ್ಗ ಹೋಬಳಿ, ಹೊಳಲ್ಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ–577518 | SC | 10–04–1972 | 32–02–23 | ಏಳನೇ ತರಗತಿ 90.545 | ಉಪನೋಂದಣಿ ಕಛೇರಿ, ಸಿರುಗುಪ್ಪ | ಪರಿಶಿಷ್ಟ ಜಾತಿ ಗ್ರಾಮೀಣ ಅಭ್ಯರ್ಥಿ ಮುಖ್ಯಪಟ್ಟಿ |

ಈ ನೇಮಕಾತಿ ಆದೇಶವು ಕೆಳಕಂಡ ಷರತ್ತುಗಳಿಗೆ ಒಳಪಟ್ಟಿರುತ್ತದೆ. ಮತ್ತು ಅಭ್ಯರ್ಥಿಯು ಈ ಕೆಳಕಂಡ ಷರತ್ತುಗಳಿಗೆ ಬದ್ಧರಾಗಿರತಕ್ಕದ್ದು.

**ಷರತ್ತುಗಳು:**

1) ಈ ನೇಮಕಾತಿಯು ತಾತ್ಕಾಲಿಕವಾಗಿದ್ದು ಸದರಿ ಅಭ್ಯರ್ಥಿಯನ್ನು ಯಾವುದೇ ನೋಟೀಸ್ ಅಥವಾ ಕಾರಣ ನೀಡದೇ ಯಾವುದೇ ಘಳಿಗೆಯಲ್ಲಾದರೂ ಕೆಲಸದಿಂದ ತೆಗೆದು ಹಾಕುವ ಷರತ್ತಿಗೆ ಒಳಪಟ್ಟು ನೇಮಕಾತಿ ಮಾಡಲಾಗಿದೆ.

2) ಈ ನೇಮಕಾತಿ ಆದೇಶವು ಯಾವುದೇ ಸಂದರ್ಭದಲ್ಲಾದರೂ ತಿದ್ದೋಲೆ ಮತ್ತು ಮಾರ್ಪಾಡಿಗೆ ಒಳಪಟ್ಟಿರುತ್ತದೆ.

3) ಸದರಿ ಅಭ್ಯರ್ಥಿಯನ್ನು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977 ರಲ್ಲಿನ ನಿಬಂಧನೆಗಳಿಗೆ ಒಳಪಡಿಸಿ ಮತ್ತು ಕರ್ತವ್ಯಕ್ಕೆ ಹಾಜರಾದ ದಿನಾಂಕದಿಂದ ಎರಡು ವರ್ಷದ ಪರೀಕ್ಷಾರ್ಥ ಅವಧಿಗೆ ಒಳಪಡಿಸಿ ತಾತ್ಕಾಲಿಕವಾಗಿ ನೇಮಕ ಮಾಡಲಾಗಿದೆ.

4) ಎರಡು ವರ್ಷದ ಪರೀಕ್ಷಾರ್ಥ ಅವಧಿಯಲ್ಲಿ ಅಭ್ಯರ್ಥಿಗಳು ತಮ್ಮ ವರ್ಗಾವಣೆಗಾಗಿ ರಾಜಕೀಯ ಅಥವಾ ಇನ್ನಾವುದೇ ರೀತಿಯ ಒತ್ತಡ ತಂದಲ್ಲಿ ಅಂತಹವರ ವಿರುದ್ಧ ಕಾನೂನು ರೀತ್ಯಾ ಶಿಸ್ತು ಕ್ರಮ ಜರುಗಿಸಲಾಗುವುದು.

5) ನೇಮಕಾತಿ ಮಾಡಿರುವ ಸ್ಥಳದ ಅಥವಾ ಕಛೇರಿಯ ಮಾರ್ಪಾಡಿಗಾಗಿ ಯಾವುದೇ ಮನವಿಗಳನ್ನು ಯಾವುದೇ ಕಾರಣಕ್ಕಾಗಲೀ ಪುರಸ್ಕರಿಸಲಾಗುವುದಿಲ್ಲ.

6) ಈ ನೇಮಕಾತಿಯು ಆಗಿಂದಾಗ್ಗೆ ಜಾರಿಯಲ್ಲಿರುವ ಸೇವಾ ಷರತ್ತುಗಳು ನಿಯಮ ಮತ್ತು ಆದೇಶಗಳಿಗೆ ಒಳಪಡುತ್ತದೆ. ಹಾಗೂ ಸದರಿ ಅಭ್ಯರ್ಥಿಗಳು ಕೆ.ಸಿ.ಎಸ್.ಆರ್. ಮತ್ತು ಕೆ.ಸಿ.ಎಸ್ (ನಡತೆ) ನಿಯಮಗಳು 1966ರಲ್ಲಿನ ಮತ್ತು ಕೆ.ಸಿ.ಎಸ್. (ಸಿ.ಸಿ.ಎ.) ನಿಯಮಗಳು 1957ರಲ್ಲಿನ ಹಾಗೂ ಆಗಿಂದಾಗ್ಗೆ ಜಾರಿಗೆ ಬರುವ ಹಾಗೂ ಜಾರಿಯಲ್ಲಿರುವ ಇತರೆ ಸೇವಾ ಷರತ್ತುಗಳಿಗೆ ಮತ್ತು ನಿಬಂಧನೆಗಳಿಗೆ ಒಳಪಡುತ್ತಾರೆ.

7) ಈ ಆದೇಶ ಮುಟ್ಟಿದ 15 (ಹದಿನೈದು) ದಿನಗಳ ಅವಧಿಯೊಳಗೆ ಅಭ್ಯರ್ಥಿಯು ಕೆಲಸಕ್ಕೆ ಹಾಜರಾಗತಕ್ಕದ್ದು ಒಂದು ವೇಳೆ ನಿಗದಿತ ಅವಧಿಯೊಳಗೆ ಕೆಲಸಕ್ಕೆ ಹಾಜರಾಗದಿದ್ದಲ್ಲಿ ಈ ನೇಮಕಾತಿ ರದ್ದಾಗುವುದು ಹಾಗೂ ನೇಮಕಾತಿ ಬಗ್ಗೆ ಅಭ್ಯರ್ಥಿಯು ಯಾವ ಹಕ್ಕನ್ನೂ ಹೊಂದಿರುವುದಿಲ್ಲವೆಂದು ತಿಳಿಯತಕ್ಕದ್ದು.

8) ಅಭ್ಯರ್ಥಿಗಳು ಅವರ ಕಾರ್ಯ, ಕರ್ತವ್ಯ ಮತ್ತು ಪ್ರಕಾರ್ಯಗಳನ್ನು ಶ್ರದ್ದೆ, ಭಕ್ತಿ ಮತ್ತು ಆಸಕ್ತಿಯಿಂದ ತೃಪ್ತಿಕರವಾಗಿ ಮಾಡತಕ್ಕದ್ದು.

9) ಅಭ್ಯರ್ಥಿಗಳು ಅವರ ದುರ್ವರ್ತನೆಯಿಂದ, ದುರ್ನಡತೆಯಿಂದ ಹಾಗೂ ಉದಾಸೀನತೆಯಿಂದ ನಿರ್ಲಕ್ಷತೆಯ ನಿಮಿತ್ತ ಸರ್ಕಾರಕ್ಕೆ ಸಂಬಂಧಿಸಿದಂತೆ ಉಂಟುಮಾಡುವ ಎಲ್ಲಾ ರೀತಿಯ ಆರ್ಥಿಕ ನಷ್ಟಗಳನ್ನು ಸರ್ಕಾರಕ್ಕೆ ಸದರಿ ಅಭ್ಯರ್ಥಿಗಳು ಭರಿಸಿಕೊಡಲು ಬದ್ದರಾಗಿರುತ್ತಾರೆ ಹಾಗೂ ಹೊಣೆಗಾರರಾಗಿರುತ್ತಾರೆಂದು ತಿಳಿಯತಕ್ಕದ್ದು.

10) ಅಭ್ಯರ್ಥಿಗಳು ಅವರ ಕರ್ತವ್ಯಗಳನ್ನು ಪಾಲಿಸುತ್ತಿರುವಾಗ ಅಥವಾ ನೆರವೇರಿಸುತ್ತಿರುವಾಗ ಅವರಿಗೆ ಲಭ್ಯವಾಗಬಹುದಾದ ಅಥವಾ ದೊರಕಬಹುದಾದ ಅಧಿಕೃತ ಮಾಹಿತಿಗಳನ್ನು ಗುಪ್ತವಾಗಿಟ್ಟು ಅದರ ಗೌಪ್ಯತೆಯನ್ನು ಕಟ್ಟುನಿಟ್ಟಾಗಿ ಕಾಪಾಡತಕ್ಕದ್ದು.

11) ಅಭ್ಯರ್ಥಿಗಳು ಸಲ್ಲಿಸಿರುವ ಅಂಕಪಟ್ಟಿಗಳು ಮತ್ತು ಮೀಸಲಾತಿ ಪ್ರಮಾಣ ಪತ್ರಗಳು ಹಾಗೂ ಜಾತಿ ಪ್ರಮಾಣ ಪತ್ರಗಳು ಸಕ್ಷಮ ಪ್ರಾಧಿಕಾರದಿಂದ ಸತ್ಯಾಪನೆಗೆ ಒಳಪಡುತ್ತವೆ.

12) ಅಭ್ಯರ್ಥಿಯು ತಮ್ಮ ಜಾತಿ, ಜನ್ಮ ದಿನಾಂಕ, ವಿದ್ಯಾರ್ಹತೆ ಇತ್ಯಾದಿಯಾಗಿ ಯಾವುದೇ ವಿಚಾರದಲ್ಲಿ ಅಭ್ಯರ್ಥಿಯು ನೀಡಿರುವ ವಿವರಗಳು ಸುಳ್ಳೆಂದಾಗಲೀ ಅಥವಾ ತಪ್ಪೆಂದಾಗಲೀ ತಿಳಿದು ಬಂದಲ್ಲಿ ಅಂತಹ ಅಭ್ಯರ್ಥಿಯ ವಿರುದ್ಧ ಭಾರತೀಯ ದಂಡ ಸಂಹಿತೆಯಲ್ಲಿನ ಸೂಕ್ತ ಕಲಂಗಳ ಅಡಿಯಲ್ಲಿ ಕ್ರಮ ಕೈಗೊಳ್ಳಲಾಗುವುದು ಹಾಗೂ ಕೆ.ಸಿ.ಎಸ್. (ಸಿ.ಸಿ.ಎ.) ನಿಯಮಗಳು 1957ರ ಅಡಿಯಲ್ಲಿ ಶಿಸ್ತು ಕ್ರಮ ಕೈಗೊಳ್ಳಲಾಗುವುದು.

13) ಅಭ್ಯರ್ಥಿಗಳು ಸಲ್ಲಿಸಿರುವ ಆಯಾಯ ಮೀಸಲಾತಿ ಪ್ರಮಾಣ ಪತ್ರಗಳ ಆಧಾರದ ಮೇಲೆ ಅಭ್ಯರ್ಥಿಗಳನ್ನು ಆಯಾಯ ಮೀಸಲಾತಿ category ಗೆ ಸೇರಿದವರಲ್ಲವೆಂದು ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ನೇಮಕಾತಿಯನ್ನು ಶಾಶ್ವತವಾಗಿ ಯಾವುದೇ ಸೂಚನೆ ಇಲ್ಲದೇ ರದ್ದುಪಡಿಸಲಾಗುವುದು.

14) ಅಭ್ಯರ್ಥಿಗಳು ಪರಿಶಿಷ್ಠ ಜಾತಿ ಮತ್ತು ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಲ್ಲವೆಂದು ಸತ್ಯಾಪನೆಯಿಂದ ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ನೇಮಕಾತಿಯನ್ನು ಶಾಶ್ವತವಾಗಿ ಯಾವುದೇ ಸೂಚನೆ ಇಲ್ಲದೇ ರದ್ದುಪಡಿಸಲಾಗುವುದು.

15) ಅಭ್ಯರ್ಥಿಯು KGID ಯಲ್ಲಿ ಸರ್ಕಾರಿ ವಿಮೆಯನ್ನು ಕಡ್ಡಾಯವಾಗಿ ಕೆಲಸಕ್ಕೆ ಹಾಜರಾದ ಕೂಡಲೇ ಮಾಡತಕ್ಕದ್ದು.

16) ಅಭ್ಯರ್ಥಿಯು ಕೆಳಕಂಡ ದಾಖಲೆಗಳನ್ನು ತಾವು ಕೆಲಸಕ್ಕೆ ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ತಪ್ಪದೇ ಹಾಜರುಪಡಿಸತಕ್ಕದ್ದು.

    1) ಅಭ್ಯರ್ಥಿಯು ತಮ್ಮ passport Size ನ ಎರಡು ಇತ್ತೀಚಿನ ಪೋಟೋ
    2) ವಿದ್ಯಾರ್ಹತೆಯ ಬಗ್ಗೆ ಏಳನೇ ತರಗತಿ ಮೂಲ ಅಂಕಪಟ್ಟಿ (Original)
    3) ಜನ್ಮ ದಿನಾಂಕದ ಬಗ್ಗೆ ಮೂಲ T.C. (Original)
    4) ಸಂಬಂಧಪಟ್ಟ ಸರ್ಕಾರಿ ಜಿಲ್ಲಾ ಸರ್ಜನ್‌ನಿಂದ ನಿಗದಿತ ನಮೂನೆಯಲ್ಲಿ ಪಡೆದ ವೈದ್ಯಕೀಯ ದೈಹಿಕ ಪ್ರಮಾಣ ಪತ್ರ (Original) (Physical Fitness Certificate)

5) ಅಭ್ಯರ್ಥಿಯು ಕಡೆಯದಾಗಿ ಹಾಜರಾಗಿದ್ದ ಶಾಲೆಯ ಮುಖ್ಯೋಪಾಧ್ಯಾಯರು ನೀಡಿರುವ ನಡತೆ ಪ್ರಮಾಣ ಪತ್ರ (Original)

17) ನೇಮಕಾತಿ ಹೊಂದಿದವರು ಕೆಳಕಂಡ ಮೀಸಲಾತಿ ದಾಖಲೆಗಳಲ್ಲಿ ಯಾವುದು ಅನ್ವಯವಾಗುವುದೋ ಅದನ್ನು ಅಂದರೆ

I. ಗ್ರಾಮೀಣ ಅಭ್ಯರ್ಥಿಗಳಾಗಿದ್ದಲ್ಲಿ ನಿಗದಿತ ನಮೂನೆ–2 ರಲ್ಲಿ ಗ್ರಾಮೀಣ ಮೂಲ ಮೀಸಲಾತಿ ಪ್ರಮಾಣ ಪತ್ರವನ್ನು,

II. ಕನ್ನಡ ಮಾಧ್ಯಮ ಅಭ್ಯರ್ಥಿಗಳಾಗಿದ್ದಲ್ಲಿ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿರುವ ಬಗ್ಗೆ ಇರುವ ನಿಗದಿತ ನಮೂನೆಯ ಮೂಲ ಪ್ರಮಾಣ ಪತ್ರವನ್ನು,

III. ಮಾಜಿ ಸೈನಿಕ ಅಭ್ಯರ್ಥಿಗಳಾಗಿದ್ದಲ್ಲಿ ಸೇನಾ ಬಿಡುಗಡೆ ಮೂಲ ಪ್ರಮಾಣ ಪತ್ರವನ್ನು,

IV. ಯೋಜನಾ ನಿರಾಶ್ರಿತ ಅಭ್ಯರ್ಥಿಗಳಾಗಿದ್ದಲ್ಲಿ ನಿಗದಿತ ನಮೂನೆಯ ಯೋಜನಾ ನಿರಾಶ್ರಿತ ಮೂಲ ಪ್ರಮಾಣ ಪತ್ರವನ್ನು,

V. ಹಾಗೂ ಅಂಗವಿಕಲ ಅಭ್ಯರ್ಥಿಗಳಾಗಿದ್ದಲ್ಲಿ ಅಂಗವಿಕಲರೆಂಬುದಕ್ಕೆ ನಿಗದಿತ ನಮೂನೆ–ಎ ಮತ್ತು ನಮೂನೆ–ಬಿ ಯಲ್ಲಿ ನೀಡಿರುವ ಸರ್ಕಾರಿ ವೈದ್ಯಕೀಯ ಪ್ರಮಾಣ ಪತ್ರವನ್ನು

ಅಭ್ಯರ್ಥಿಗಳು ಮೇಲ್ಕಂಡವುಗಳಲ್ಲಿ ಯಾವುದು ಅನ್ವಯವಾಗುವುದೋ ಅದನ್ನು ಕೆಲಸಕ್ಕೆ ಹಾಜರಾಗುವ ಸಮಯದಲ್ಲಿ ಈ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.

**ಅಭ್ಯರ್ಥಿಗಳು ಕೆಳಕಂಡ ನಮೂನೆಗಳನ್ನು ಮತ್ತು ಮುಚ್ಚಳಿಕೆಗಳನ್ನು ಕೆಲಸಕ್ಕೆ ಹಾಜರಾಗುವ ಮುನ್ನ ತಪ್ಪದೇ ಬರೆದುಕೊಡತಕ್ಕದ್ದು**

18) ಅಭ್ಯರ್ಥಿಯು ಭಾರತದ ಸಂವಿಧಾನಕ್ಕೆ ಬದ್ಧರಾಗಿರುವ ಬಗ್ಗೆ ಪ್ರತಿಜ್ಞಾ ವಿಧಿಯನ್ನು ಇದಕ್ಕೆ ಲಗತ್ತಿಸಿರುವ ನಮೂನೆಯಲ್ಲಿ ಕೆಲಸಕ್ಕೆ ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರಿಗೆ ಬರೆದುಕೊಡತಕ್ಕದ್ದು.

19) ಅಭ್ಯರ್ಥಿಯು ಮದುವೆಯಾಗಿದ್ದಲ್ಲಿ ಒಬ್ಬರೇ ಪತಿ ಅಥವಾ ಪತ್ನಿ ಹೊಂದಿರುವ ಬಗ್ಗೆ ಕೆ.ಸಿ.ಎಸ್. (ನಡತೆ) ನಿಯಮಗಳು 1966 ರಲ್ಲಿನ ನಿಯಮ 28ರ ರೀತ್ಯ ಇದಕ್ಕೆ ಲಗತ್ತಿಸಿರುವ ನಮೂನೆಯಲ್ಲಿರುವ ಘೋಷಣಾ ಪತ್ರವನ್ನು ಕೆಲಸಕ್ಕೆ ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರಿಗೆ ಬರೆದುಕೊಡತಕ್ಕದ್ದು.

20) ಒಂದು ವೇಳೆ ಅಭ್ಯರ್ಥಿಯು ಸಲ್ಲಿಸಿರುವ ಅಂಕಪಟ್ಟಿಗಳು ಮತ್ತು ಮೀಸಲಾತಿ ಪ್ರಮಾಣ ಪತ್ರಗಳು ಹಾಗೂ ಜಾತಿ ಪ್ರಮಾಣ ಪತ್ರಗಳು ಸುಳ್ಳು ಅಥವಾ ನಕಲಿ ಎಂದು ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ಆಯ್ಕೆಯನ್ನು ಮತ್ತು ನೇಮಕಾತಿಯನ್ನು ಶಾಶ್ವತವಾಗಿ ರದ್ದುಪಡಿಸಲಾಗುವುದು ಹಾಗೂ ಅಭ್ಯರ್ಥಿಯ ವಿರುದ್ಧ ಭಾರತೀಯ ದಂಡ ಸಂಹಿತೆಯಲ್ಲಿನ ಸೂಕ್ತ ಕಲಂಗಳ ಅಡಿಯಲ್ಲಿ ಕ್ರಮ ಕೈಗೊಳ್ಳಲಾಗುವುದು ಹಾಗೂ KCS (CCA) ನಿಯಮಗಳು 1957ರ ಅಡಿಯಲ್ಲಿ ಶಿಸ್ತು ಕ್ರಮ ಕೈಗೊಳ್ಳಲಾಗುವುದು. ಇದಕ್ಕೆ ಬದ್ಧನಾಗಿರುತ್ತೇನೆ ಎಂಬ ಬಗ್ಗೆ ಅಭ್ಯರ್ಥಿಯು 20/– ರೂ.ಗಳ ಛಾಪಾ ಕಾಗದದಲ್ಲಿ ಇದಕ್ಕೆ ಲಗತ್ತಿಸಿರುವ ಮುಚ್ಚಳಿಕೆ ನಮೂನೆ–1 ಅನ್ನು ಕೆಲಸಕ್ಕೆ ಹಾಜರಾಗುವ ಮುನ್ನ ಈ ಕಛೇರಿಗೆ ಬರೆದುಕೊಡತಕ್ಕದ್ದು.

21) ಈ ನೇಮಕಾತಿಗಾಗಿ ಅರ್ಜಿ ಸಲ್ಲಿಸಿರುವ ಅಭ್ಯರ್ಥಿಗಳ ಪೈಕಿ ಬೇರೆ ಇನ್ನಾವುದೇ ಅಭ್ಯರ್ಥಿಯು ಅವರ ಆಯ್ಕೆಯನ್ನು ದಾಖಲೆ ಸಹಿತ establish ಮಾಡಿದಲ್ಲಿ ಅಥವಾ ನನ್ನ ನೇಮಕಾತಿಯು ಅಸಿಂಧುವೆಂದು ದಾಖಲೆಗಳ ಸಹಿತ ಸಾಬೀತು ಪಡಿಸಿದಲ್ಲಿ ನನ್ನ ನೇಮಕಾತಿಯನ್ನು ಯಾವುದೇ ಸೂಚನೆ ಇಲ್ಲದೇ ಶಾಶ್ವತವಾಗಿ ರದ್ದುಗೊಳಿಸಿ ನನ್ನ ಬದಲಿಗೆ ಬೇರೊಬ್ಬರನ್ನು ಆಯ್ಕೆ ಮಾಡಬಹುದು ಎಂಬ ಬಗ್ಗೆ ಅಭ್ಯರ್ಥಿಯು 20/– ರೂ. ಛಾಪಾ ಕಾಗದದಲ್ಲಿ ಇದಕ್ಕೆ ಲಗತ್ತಿಸಿರುವ ಮುಚ್ಚಳಿಕೆ ನಮೂನೆ–2 ಅನ್ನು ಕೆಲಸಕ್ಕೆ ಹಾಜರಾಗುವ ಮುನ್ನ ಈ ಕಛೇರಿಗೆ ಬರೆದುಕೊಡತಕ್ಕದ್ದು.

22) ಒಂದು ವೇಳೆ ನಾನು ಈ ಇಲಾಖೆಯಲ್ಲಿ ಜವಾನರೆಂದು ನೇಮಕಾತಿ ಹೊಂದುವ ಮೊದಲು ಅಥವಾ ನಾನು ಜವಾನರೆಂದು ನೇಮಕಾತಿ ಹೊಂದಿ ಈ ಇಲಾಖೆಯಲ್ಲಿ ಜವಾನರಾಗಿ ಸರ್ಕಾರಿ ಕೆಲಸಕ್ಕೆ ಹಾಜರಾದ ದಿನಾಂಕದ ನಂತರ ನಾನು ಸರ್ಕಾರಿ ಸೇವೆಯಿಂದ ಶಾಶ್ವತವಾಗಿ ನಿರ್ಗಮಿಸುವ ದಿನಾಂಕದವರೆಗಿನ ಅವಧಿಯಲ್ಲಿ ಅಂದರೆ ನಾನು ಈ ಇಲಾಖೆಯಲ್ಲಿ ಸರ್ಕಾರಿ ನೌಕರನಾಗಿರುವ ಅವಧಿಯಲ್ಲಿ ಈ ನೇಮಕಾತಿಗಾಗಿ ಅರ್ಜಿ ಸಲ್ಲಿಸಿರುವ ಅಭ್ಯರ್ಥಿಗಳ ಪೈಕಿ ಬೇರೆ ಇನ್ನಾವುದೇ ಅಭ್ಯರ್ಥಿಯಾಗಲೀ ಅಥವಾ ಬೇರೆ ಇನ್ನಾವುದೇ ಸಾರ್ವಜನಿಕರಾಗಲೀ ದಾಖಲೆಗಳ ಸಹಿತ ಸಕಾರಣಗಳೊಂದಿಗೆ ನಾನು ಏಳನೇ ತರಗತಿಯಲ್ಲಿ ತೇರ್ಗಡೆ ಹೊಂದಿಲ್ಲವೆಂದಾಗಲೀ ಅಥವಾ ನಾನು ಸಲ್ಲಿಸಿರುವ ಏಳನೇ ತರಗತಿಯ ಅಂಕಪಟ್ಟಿಯು ನಕಲಿ (ಖೊಟ್ಟಿ) ಎಂದಾಗಲೀ ದಾಖಲೆಗಳ ಸಹಿತ ಸಾಬೀತುಪಡಿಸಿದಲ್ಲಿ ನನ್ನ ಆಯ್ಕೆಯನ್ನು ಮತ್ತು ಈ ನನ್ನ ನೇಮಕಾತಿಯನ್ನು ಯಾವುದೇ ಕಾರಣ ನೀಡದೇ ಯಾವುದೇ ಘಳಿಗೆಯಲ್ಲಾದರೂ ಶಾಶ್ವತವಾಗಿ ರದ್ದುಪಡಿಸುವುದಕ್ಕೂ ಹಾಗೂ ಯಾವುದೇ ಕಾರಣ ನೀಡದೇ ಅಥವಾ ಯಾವುದೇ ನೋಟೀಸ್ ನೀಡದೇ ನನ್ನನ್ನು ಸರ್ಕಾರಿ ಸೇವೆಯಿಂದ ಶಾಶ್ವತವಾಗಿ ವಜಾ ಮಾಡುವುದಕ್ಕೂ ನಾನು ಒಪ್ಪಿರುತ್ತೇನೆ ಎಂಬ ಬಗ್ಗೆ ಅಭ್ಯರ್ಥಿಯು ರೂ.20/– ರೂ. ಛಾಪಾ ಕಾಗದದಲ್ಲಿ ಇದಕ್ಕೆ ಲಗತ್ತಿಸಿರುವ ಮುಚ್ಚಳಿಕೆ ನಮೂನೆ–3 ಅನ್ನು ಕೆಲಸಕ್ಕೆ ಹಾಜರಾಗುವ ಮುನ್ನ ಈ ಕಛೇರಿಗೆ ಬರೆದುಕೊಡತಕ್ಕದ್ದು.

23) ಸರ್ಕಾರದವರು ಈ ಹಿಂದೆ ಜಾರಿಯಲ್ಲಿದ್ದ ನಿವೃತ್ತಿ ಪಿಂಚಣಿ ಸೌಲಭ್ಯ ಯೋಜನೆಗೆ ಬದಲಾಗಿ ದಿನಾಂಕ:01.04.2006 ರಿಂದ ಜಾರಿಗೆ ಬರುವಂತೆ ಸರ್ಕಾರದ ಆದೇಶ ಸಂಖ್ಯೆ: FD (SPL)-04 PET 2005, ದಿನಾಂಕ:31.03.2006ರ ಆದೇಶದಲ್ಲಿ ಹೊಸದಾಗಿ New defined Contributory Pension Scheme ಎಂಬ ಹೊಸ ಪಿಂಚಣಿ ಯೋಜನೆಯನ್ನು ಜಾರಿಗೆ ತಂದಿರುತ್ತಾರೆ. ಈ ಹೊಸ ಪಿಂಚಣಿ ಯೋಜನೆಯು ದಿನಾಂಕ:01.04.2006 ರಿಂದ ಅಥವಾ ತದನಂತರ ನೇಮಕಾತಿ ಹೊಂದಿದ ಎಲ್ಲಾ ರಾಜ್ಯ ಸರ್ಕಾರಿ ನೌಕರರಿಗೆ

ಅನ್ವಯಿಸುತ್ತದೆ ಎಂದು ಆದೇಶ ಮಾಡಿರುತ್ತಾರೆ. ಆದ್ದರಿಂದ ಈ ಜಿಲ್ಲೆಯಲ್ಲಿ ನೇಮಕ ಹೊಂದಿದ ಸದರಿ ನೌಕರರು ದಿನಾಂಕ:31.03.2006ರ ಸದರಿ ಸರ್ಕಾರದ ಆದೇಶದನ್ವಯ ಹೊಸ ಪಿಂಚಣಿ ಯೋಜನೆಗೆ ಒಳಪಡುತ್ತಾರೆಂದು ಈ ಮೂಲಕ ಆದೇಶಿಸಿದೆ ಹಾಗೂ ದಿನಾಂಕ:31.03.2006ರ ಸದರಿ ಸರ್ಕಾರದ ಆದೇಶದನ್ವಯ ಹೊಸ ಪಿಂಚಣಿ ಯೋಜನೆಗೆ ಒಳಪಡುತ್ತಾರೆಂದು ಈ ಮೂಲಕ ಆದೇಶಿಸಿದೆ ಹಾಗೂ ದಿನಾಂಕ: 31.03.2006 ಸದರಿ ಸರ್ಕಾರದ ಆದೇಶದಲ್ಲಿನ ನಿರ್ದೇಶನಕ್ಕೆ ಸದರಿ ನೌಕರರು ಬದ್ಧರಾಗಿರತಕ್ಕದ್ದು.

ನೇಮಕಾತಿ ಪ್ರಾಧಿಕಾರಿ ಹಾಗೂ
ಜಿಲ್ಲಾ ನೋಂದಣಾಧಿಕಾರಿಗಳು,
ಬಳ್ಳಾರಿ ಜಿಲ್ಲೆ, ಬಳ್ಳಾರಿ.

ಪಿ.ಆರ್.803

**ಕರ್ನಾಟಕ ಸರ್ಕಾರ**

**ನೋಂದಣಿ ಮತ್ತು ಮುದ್ರಾಂಕ ಇಲಾಖೆ**

**ನೇಮಕಾತಿ ಆದೇಶ**

**ವಿಷಯ:** ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಉಡುಪಿ ಜಿಲ್ಲೆಯ ದ್ವಿತೀಯ ದರ್ಜೆ ಸಹಾಯಕರ ಬ್ಯಾಕ್‌ಲಾಗ್ ಹುದ್ದೆಗಳಲ್ಲಿ ಅಭ್ಯರ್ಥಿಗಳನ್ನು ನೇಮಕ ಮಾಡಿಕೊಳ್ಳುವ ಬಗ್ಗೆ.

**ಉಲ್ಲೇಖ:**1) ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 13 ಎಸ್‌ಬಿಸಿ 2001 ದಿನಾಂಕ:21.11.2001 ರನ್ವಯ ಪ್ರಕಟಿಸಿರುವ ಬ್ಯಾಕ್‌ಲಾಗ್ ನೇಮಕಾತಿ ನಿಯಮಗಳು 2001

2) ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಅವರ ಅಲಾಟ್‌ಮೆಂಟ್ ಆದೇಶ ಸಂಖ್ಯೆ: EST–1–273/2001–02 ದಿನಾಂಕ:6.12.2010.

**ಪ್ರಸ್ತಾವನೆ:**

ಈ ಇಲಾಖೆಯ ಕೆಳಕಂಡ ಜಿಲ್ಲೆಯಲ್ಲಿ ದ್ವಿತೀಯ ದರ್ಜೆ ಸಹಾಯಕರ ವೃಂದದಲ್ಲಿ ಕೆಳಕಂಡಂತೆ ಬ್ಯಾಕ್‌ಲಾಗ್ ಹುದ್ದೆಗಳು ಇರುತ್ತವೆಂದು ಗುರುತಿಸಿ ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ಬೆಂಗಳೂರು ಇವರಿಗೆ ವರದಿ ಮಾಡಲಾಗಿತ್ತು.

| ಕ್ರ.ಸಂ. | ಜಿಲ್ಲೆ | ಸದರಿ ಜಿಲ್ಲೆಯಲ್ಲಿ ಗುರುತಿಸಲ್ಪಟ್ಟ ಬ್ಯಾಕ್‌ಲಾಗ್ ಹುದ್ದೆಗಳ ಸಂಖ್ಯೆ | | |
|---|---|---|---|---|
| | | ಪರಿಶಿಷ್ಟ ಜಾತಿ | ಪರಿಶಿಷ್ಟ ಪಂಗಡ | ಒಟ್ಟು |
| 1. | ಉಡುಪಿ ಜಿಲ್ಲೆ | ಎರಡು | ಒಂದು | ಮೂರು |

ತದನಂತರ ಮೇಲ್ಕಂಡಂತೆ ಗುರುತಿಸಲ್ಪಟ್ಟ ಪರಿಶಿಷ್ಟ ಪಂಗಡದ ಈ ಒಂದು ಬ್ಯಾಕ್‌ಲಾಗ್ ಹುದ್ದೆಗಳಲ್ಲಿ ಪರಿಶಿಷ್ಟ ಪಂಗಡದ ಬ್ಯಾಕ್‌ಲಾಗ್ ಅಭ್ಯರ್ಥಿಯಾದ ನಾಗರಾಜ ಬಿ. ಓಲೇಕಾರ ಎಂಬುವರನ್ನು ಮತ್ತು ಮೇಲ್ಕಂಡಂತೆ ಗುರುತಿಸಲ್ಪಟ್ಟ ಪರಿಶಿಷ್ಟ ಜಾತಿಯ ಎರಡು ಬ್ಯಾಕ್‌ಲಾಗ್ ಹುದ್ದೆಗಳ ಪೈಕಿ ಒಂದು ಬ್ಯಾಕ್‌ಲಾಗ್ ಹುದ್ದೆಯಲ್ಲಿ ಪರಿಶಿಷ್ಟ ಜಾತಿಯ ಬ್ಯಾಕ್‌ಲಾಗ್ ಅಭ್ಯರ್ಥಿಯಾದ ಪುಂಡಲೀಕ ಮಾರುತಿ ಕೆಂಪರಾಯಗೋಳ ಎಂಬುವರನ್ನು ದ್ವಿತೀಯ ದರ್ಜೆ ಸಹಾಯಕರೆಂದು ಈಗಾಗಲೇ ನೇಮಕಮಾಡಿಕೊಳ್ಳಲಾಗಿದೆ.

ಆದರೆ ಮೇಲ್ಕಂಡಂತೆ ಗುರುತಿಸಲ್ಪಟ್ಟ ಭರ್ತಿಯಾಗದೇ ಉಳಿದ ಪರಿಶಿಷ್ಟ ಜಾತಿಯ ಇನ್ನೊಂದು ಬ್ಯಾಕ್‌ಲಾಗ್ ಹುದ್ದೆಯಲ್ಲಿ ದ್ವಿತೀಯ ದರ್ಜೆ ಸಹಾಯಕರೆಂದು ನೇಮಕಗೊಂಡ ಪರಿಶಿಷ್ಟ ಜಾತಿಯ ಬ್ಯಾಕ್‌ಲಾಗ್ ಅಭ್ಯರ್ಥಿಗಳು ಯಾರೂ ಈ ಜಿಲ್ಲೆಯಲ್ಲಿ ಕೆಲಸಕ್ಕೆ ಹಾಜರಾಗದ ಕಾರಣ ಇವರುಗಳಿಗೆ ನೀಡದ ನೇಮಕಾತಿ ಆದೇಶಗಳನ್ನು ಕಾನೂನು ರೀತ್ಯಾ ರದ್ದುಪಡಿಸಿ ಈ ವಿಷಯವನ್ನು ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರಿಗೆ ತಿಳಿಸಲಾಯಿತು.

ಈಗ ಮೇಲ್ಕಂಡಂತೆ ಗುರುತಿಸಲ್ಪಟ್ಟು ಭರ್ತಿಯಾಗದೇ ಉಳಿದ ಪರಿಶಿಷ್ಟ ಜಾತಿಯ ಇನ್ನೊಂದು ಬ್ಯಾಕ್‌ಲಾಗ್ ಹುದ್ದೆಯಲ್ಲಿ ನೇಮಕಾತಿ ಮಾಡಿಕೊಳ್ಳುವುದಕ್ಕಾಗಿ ಕೆಳಕಂಡ ಬ್ಯಾಕ್‌ಲಾಗ್ ಅಭ್ಯರ್ಥಿಯನ್ನು ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರು ಉಲ್ಲೇಖ (2)ರ ಅವರ ರೀ–ಅಲಾಟ್‌ಮೆಂಟ್ ಆದೇಶದಲ್ಲಿ ಈ ಜಿಲ್ಲೆಗೆ ನೇಮಕಾತಿಗಾಗಿ ಅಲಾಟ್ ಮಾಡಿ ಈ ಕೆಳಕಂಡ ಬ್ಯಾಕ್‌ಲಾಗ್ ಅಭ್ಯರ್ಥಿಯನ್ನು ಈ ಜಿಲ್ಲೆಯಲ್ಲಿ ದ್ವಿತೀಯ ದರ್ಜೆ ಸಹಾಯಕರೆಂದು ನೇಮಕ ಮಾಡಿಕೊಳ್ಳುವಂತೆ ನಿರ್ದೇಶಿಸಿದ್ದರ ಮೇರೆ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ: ಜಿನೋಸಿಬ್ಬಂದಿ:38/2010–11, ದಿನಾಂಕ:27ನೇ ಡಿಸೆಂಬರ್, 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಹಾಗೂ ಉಲ್ಲೇಖ (1)ರ ಬ್ಯಾಕ್‌ಲಾಗ್ ನಿಯಮಗಳನ್ವಯ ಪ್ರದತ್ತವಾದ ಅಧಿಕಾರದ ಮೇರೆಗೆ ಉಲ್ಲೇಖ (2)ರಲ್ಲಿನ ರೀ–ಅಲಾಟ್‌ಮೆಂಟ್ ಆದೇಶದಲ್ಲಿ ಕಂಡುಬಂದ ಕೆಳಕಂಡ ಬ್ಯಾಕ್‌ಲಾಗ್ ಅಭ್ಯರ್ಥಿಯನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಈ ಜಿಲ್ಲೆಯಲ್ಲಿ ಖಾಲಿ ಇರುವ ದ್ವಿತೀಯ ದರ್ಜೆ ಸಹಾಯಕರ ಹುದ್ದೆಯಲ್ಲಿ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ರೂ.5800–100–6000–125–6500–150–7100–175–7800–200–8600–225–9500–250–10500ರ ವೇತನ ಶ್ರೇಣಿಯಲ್ಲಿ ಇತರೆ

ಭತ್ಯೆಗಳು ಸೇರಿದಂತೆ ತಾತ್ಕಾಲಿಕವಾಗಿ ದ್ವಿತೀಯ ದರ್ಜೆ ಸಹಾಯಕರೆಂದು ನೇಮಕ ಮಾಡಲಾಗಿದೆ. ಹಾಗೂ ಕೆಳಕಂಡ ಅಭ್ಯರ್ಥಿಯನ್ನು ಅವರ ಹೆಸರಿನ ಮುಂದೆ ಸೂಚಿಸಿರುವ ಕಛೇರಿಗೆ ದ್ವಿತೀಯ ದರ್ಜೆ ಸಹಾಯಕರೆಂದು ಸ್ಥಳ ನಿಯುಕ್ತಿಗೊಳಿಸಿದೆ.

| ಕ್ರ. ಸಂ. | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | SC / ST | ಜನ್ಮ ದಿನಾಂಕ | 7–9–2002ರ ದಿನಾಂಕಕ್ಕೆ ಅಭ್ಯರ್ಥಿಯ ವಯಸ್ಸು ವ–ತಿಂ–ದಿ | ವಿದ್ಯಾರ್ಹತೆ ಮತ್ತು ಶೇಕಡವಾರು ಅಂಕಗಳು | ಅಭ್ಯರ್ಥಿಯನ್ನು ದ್ವಿತೀಯ ದರ್ಜೆ ಸಹಾಯಕರೆಂದು ನೇಮಕ ಮಾಡಿ ಸ್ಥಳ ನಿಯುಕ್ತಿಗೊಳಿಸಿದ ಕಛೇರಿ ಹೆಸರು | ಯಾವ ಮೀಸಲಾತಿ ಅಡಿಯಲ್ಲಿ ಮತ್ತು ಯಾವ ವರ್ಗೀಕರಣದ ಅಡಿಯಲ್ಲಿ ನೇಮಕ ಮಾಡಲಾಗಿದೆಯೋ ಅದರ ವಿವರ |
|---|---|---|---|---|---|---|---|
| 1. | ಪಿ.ಎನ್. ಸೋಮಸುಂದರ ಬಿನ್ ನರಸಿಂಹಯ್ಯ ನಂ.47–1, ಹೇರೋಹಳ್ಳಿ ವಿಶ್ವನೀಡಂ ಪೋಸ್ಟ್, ಬೆಂಗಳೂರು–560091 | SC | 03–06–1972 | 30–03–04 | S.S.L.C. 71.500 | ಉಪ ನೋಂದಣಿ ಕಛೇರಿ, ಕುಂದಾಪುರ (ಉಡುಪಿ ಜಿಲ್ಲೆ) (ಇಲ್ಲಿರುವ ಖಾಲಿ ಹುದ್ದೆಗೆ) | ಪರಿಶಿಷ್ಟ ಜಾತಿ ಗ್ರಾಮೀಣ ಅಭ್ಯರ್ಥಿ ಹೆಚ್ಚುವರಿ ಪಟ್ಟಿ |

ಈ ನೇಮಕಾತಿ ಆದೇಶವು ಕೆಳಕಂಡ ಷರತ್ತುಗಳಿಗೆ ಒಳಪಟ್ಟಿರುತ್ತದೆ. ಮತ್ತು ಅಭ್ಯರ್ಥಿಗಳು ಈ ಕೆಳಕಂಡ ಷರತ್ತುಗಳಿಗೆ ಬದ್ಧರಾಗಿರತಕ್ಕದ್ದು.

**ಷರತ್ತುಗಳು:**

1) ಈ ನೇಮಕಾತಿಯು ತಾತ್ಕಾಲಿಕವಾಗಿದ್ದು ಸದರಿ ಅಭ್ಯರ್ಥಿಯನ್ನು ಯಾವುದೇ ನೋಟೀಸ್ ಅಥವಾ ಕಾರಣ ನೀಡದೇ ಯಾವುದೇ ಘಳಿಗೆಯಲ್ಲಾದರೂ ಕೆಲಸದಿಂದ ತೆಗೆದು ಹಾಕುವ ಷರತ್ತಿಗೆ ಒಳಪಟ್ಟು ನೇಮಕಾತಿ ಮಾಡಲಾಗಿದೆ.

2) ಈ ನೇಮಕಾತಿ ಆದೇಶವು ಯಾವುದೇ ಸಂದರ್ಭದಲ್ಲಾದರೂ ತಿದ್ದೋಲೆ ಮತ್ತು ಮಾರ್ಪಾಡಿಗೆ ಒಳಪಟ್ಟಿರುತ್ತದೆ.

3) ಸದರಿ ಅಭ್ಯರ್ಥಿಯನ್ನು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977 ರಲ್ಲಿನ ನಿಬಂಧನೆಗಳಿಗೆ ಒಳಪಡಿಸಿ ಮತ್ತು ಕರ್ತವ್ಯಕ್ಕೆ ಹಾಜರಾದ ದಿನಾಂಕದಿಂದ ಎರಡು ವರ್ಷದ ಅರ್ಹತಾ ಪರೀಕ್ಷಾರ್ಥ ಅವಧಿಗೆ ಒಳಪಡಿಸಿ ತಾತ್ಕಾಲಿಕವಾಗಿ ನೇಮಕ ಮಾಡಲಾಗಿದೆ.

4) ಅರ್ಹತಾ ಪರೀಕ್ಷೆ ಅವಧಿಯು ಎರಡು ವರ್ಷಗಳೆಂದು ನಿಗದಿಪಡಿಸಿದೆ. ಈ ಅವಧಿಯೊಳಗೆ 1974ರ ಕರ್ನಾಟಕ ನಾಗರೀಕ ಸೇವಾ (ಸೇವಾ ಕನ್ನಡ ಭಾಷಾ ಪರೀಕ್ಷೆಗಳು) ನಿಯಮಾವಳಿಯಲ್ಲಿ ಈ ಇಲಾಖೆಯ ದ್ವಿತೀಯ ದರ್ಜೆ ಸಹಾಯಕರ ಹುದ್ದೆಗಳಿಗೆ ನಿಗಧಿ ಪಡಿಸಿದ ಇಲಾಖಾ ಪರೀಕ್ಷೆಗಳಲ್ಲಿ ಅಭ್ಯರ್ಥಿಯು ಕಡ್ಡಾಯವಾಗಿ ತೇರ್ಗಡೆ ಹೊಂದತಕ್ಕದ್ದು. ಇದಕ್ಕೆ ತಪ್ಪಿದಲ್ಲಿ ಕೆ.ಸಿ.ಎಸ್. (ಪ್ರೊಬೇಷನ್) ರೂಲ್ಸ್ 1977ರ ಅಡಿಯಲ್ಲಿ ಕಟ್ಟುನಿಟ್ಟಿನ ಕ್ರಮ ಜರುಗಿಸಲಾಗುವುದು.

5) ನೇಮಕಾತಿ ಮಾಡಿರುವ ಸ್ಥಳದ ಅಥವಾ ಕಛೇರಿಯ ಮಾರ್ಪಾಡಿಗಾಗಿ ಯಾವುದೇ ಮನವಿಗಳನ್ನು ಯಾವುದೇ ಕಾರಣಕ್ಕಾಗಲೀ ಪುರಸ್ಕರಿಸಲಾಗುವುದಿಲ್ಲ.

6) ಈ ನೇಮಕಾತಿಯು ಆಗಿಂದಾಗ್ಗೆ ಜಾರಿಯಲ್ಲಿರುವ ಸೇವಾ ಷರತ್ತುಗಳು ನಿಯಮ ಮತ್ತು ಆದೇಶಗಳಿಗೆ ಒಳಪಡುತ್ತದೆ. ಹಾಗೂ ಸದರಿ ಅಭ್ಯರ್ಥಿಗಳು ಕೆ.ಸಿ.ಎಸ್.ಆರ್. ಮತ್ತು ಕೆ.ಸಿ.ಎಸ್ (ನಡತೆ) ನಿಯಮಗಳು 1966ರಲ್ಲಿನ ಮತ್ತು ಕೆ.ಸಿ.ಎಸ್. (ಸಿ.ಸಿ.ಎ.) ನಿಯಮಗಳು 1957ರಲ್ಲಿನ ಹಾಗೂ ಆಗಿಂದಾಗ್ಗೆ ಜಾರಿಗೆ ಬರುವ ಹಾಗೂ ಜಾರಿಯಲ್ಲಿರುವ ಇತರೆ ಸೇವಾ ಷರತ್ತುಗಳಿಗೆ ಮತ್ತು ನಿಬಂಧನೆಗಳಿಗೆ ಒಳಪಡುತ್ತಾರೆ.

7) ಈ ಆದೇಶ ಮುಟ್ಟಿದ 15 (ಹದಿನೈದು) ದಿನಗಳ ಅವಧಿಯೊಳಗೆ ಅಭ್ಯರ್ಥಿಯು ಕೆಲಸಕ್ಕೆ ಹಾಜರಾಗತಕ್ಕದ್ದು ಒಂದು ವೇಳೆ ನಿಗದಿತ ಅವಧಿಯೊಳಗೆ ಕೆಲಸಕ್ಕೆ ಹಾಜರಾಗದಿದ್ದಲ್ಲಿ ಈ ನೇಮಕಾತಿ ರದ್ದಾಗುವುದು ಹಾಗೂ ನೇಮಕಾತಿ ಬಗ್ಗೆ ಅಭ್ಯರ್ಥಿಯು ಯಾವ ಹಕ್ಕನ್ನೂ ಹೊಂದಿರುವುದಿಲ್ಲವೆಂದು ತಿಳಿಯತಕ್ಕದ್ದು.

8) ಅಭ್ಯರ್ಥಿಯು ತಮಗೆ ವಹಿಸಿದ ಕೆಲಸ ಕಾರ್ಯಗಳನ್ನು ತೃಪ್ತಿಕರವಾಗಿ ಮಾಡತಕ್ಕದ್ದು.

9) ಎರಡು ವರ್ಷದ ಪರೀಕ್ಷಾರ್ಥ ಅವಧಿಯಲ್ಲಿ ಅಭ್ಯರ್ಥಿಗಳು ತಮ್ಮ ವರ್ಗಾವಣೆಗಾಗಿ ರಾಜಕೀಯ ಅಥವಾ ಇನ್ನ್ಯಾವುದೇ ರೀತಿಯ ಒತ್ತಡ ತಂದಲ್ಲಿ ಅಂತಹವರ ವಿರುದ್ಧ ಕಾನೂನು ರೀತ್ಯಾ ಶಿಸ್ತು ಕ್ರಮ ಜರುಗಿಸಲಾಗುವುದು.

10) ಅಭ್ಯರ್ಥಿಗಳು ಸಲ್ಲಿಸಿರುವ ಅಂಕಪಟ್ಟಿಗಳು ಮತ್ತು ಮೀಸಲಾತಿ ಪ್ರಮಾಣ ಪತ್ರಗಳು ಹಾಗೂ ಜಾತಿ ಪ್ರಮಾಣ ಪತ್ರಗಳು ಸಕ್ಷಮ ಪ್ರಾಧಿಕಾರದಿಂದ ಸತ್ಯಾಪನೆಗೆ ಒಳಪಡುತ್ತವೆ.

11) ಅಭ್ಯರ್ಥಿಯು ತಮ್ಮ ಜಾತಿ, ಜನ್ಮ ದಿನಾಂಕ, ವಿದ್ಯಾರ್ಹತೆ ಇತ್ಯಾದಿಯಾಗಿ ಯಾವುದೇ ವಿಚಾರದಲ್ಲಿ ಅಭ್ಯರ್ಥಿಯು ನೀಡಿರುವ ವಿವರಗಳು ಸುಳ್ಳೆಂದಾಗಲೀ ಅಥವಾ ತಪ್ಪೆಂದಾಗಲೀ ತಿಳಿದು ಬಂದಲ್ಲಿ ಅಂತಹ ಅಭ್ಯರ್ಥಿಯ ವಿರುದ್ಧ ಭಾರತೀಯ ದಂಡ ಸಂಹಿತೆಯಲ್ಲಿನ ಸೂಕ್ತ ಕಲಂಗಳ ಅಡಿಯಲ್ಲಿ ಕ್ರಮ ಕೈಗೊಳ್ಳಲಾಗುವುದು ಹಾಗೂ ಕೆ.ಸಿ.ಎಸ್. (ಸಿ.ಸಿ.ಎ.) ನಿಯಮಗಳು 1957ರ ಅಡಿಯಲ್ಲಿ ಶಿಸ್ತು ಕ್ರಮ ಕೈಗೊಳ್ಳಲಾಗುವುದು.

12) ಅಭ್ಯರ್ಥಿಗಳು ಪರಿಶಿಷ್ಠ ಜಾತಿ ಮತ್ತು ಪರಿಶಿಷ್ಠ ಪಂಗಡದ ಅಭ್ಯರ್ಥಿಗಳಲ್ಲವೆಂದು ಸತ್ಯಾಪನೆಯಿಂದ ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ನೇಮಕಾತಿಯನ್ನು ಶಾಶ್ವತವಾಗಿ ಯಾವುದೇ ಸೂಚನೆ ಇಲ್ಲದೇ ರದ್ದುಪಡಿಸಲಾಗುವುದು.

13) ಗ್ರಾಮೀಣ ಮೀಸಲಾತಿ ಅಡಿಯಲ್ಲಿ ಆಯ್ಕೆಗೊಂಡವರು ಗ್ರಾಮೀಣ ಅಭ್ಯರ್ಥಿಗಳಲ್ಲವೆಂದು ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ನೇಮಕಾತಿಯನ್ನು ಶಾಶ್ವತವಾಗಿ ಯಾವುದೇ ಸೂಚನೆ ಇಲ್ಲದೇ ರದ್ದುಪಡಿಸಲಾಗುವುದು.

14) ಅಭ್ಯರ್ಥಿಯು KGID ಯಲ್ಲಿ ಸರ್ಕಾರಿ ವಿಮೆಯನ್ನು ಕಡ್ಡಾಯವಾಗಿ ಕೆಲಸಕ್ಕೆ ಹಾಜರಾದ ಕೂಡಲೇ ಮಾಡತಕ್ಕದ್ದು.

15) ಅಭ್ಯರ್ಥಿಯು ಕೆಳಕಂಡ ದಾಖಲೆಗಳನ್ನು ತಾವು ಕೆಲಸಕ್ಕೆ ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ತಪ್ಪದೇ ಹಾಜರುಪಡಿಸತಕ್ಕದ್ದು.

1) ತಮ್ಮ passport Size ನ ಎರಡು ಇತ್ತೀಚಿನ ಪೋಟೋ
2) ವಿದ್ಯಾರ್ಹತೆಯ ಬಗ್ಗೆ SSLC ಮೂಲ ಅಂಕಪಟ್ಟಿ (Original)
3) ಜನ್ಮ ದಿನಾಂಕದ ಬಗ್ಗೆ ಶಾಲೆಯಿಂದ ನೀಡಿದ ಮೂಲ T.C. (Original)
4) ಅಭ್ಯರ್ಥಿಯು ಗ್ರಾಮೀಣ ಅಭ್ಯರ್ಥಿಯಾಗಿರುವುದರಿಂದ ಗ್ರಾಮೀಣ ಮೀಸಲಾತಿ ನಮೂನೆ –2 ರ ಮೂಲ ಪ್ರಮಾಣ ಪತ್ರ (original)
5) ಸಂಬಂಧಪಟ್ಟ ಜಿಲ್ಲಾ ಸರ್ಜನ್‌ನಿಂದ ನಿಗದಿತ ನಮೂನೆಯಲ್ಲಿ ಪಡೆದ ವೈದ್ಯಕೀಯ ದೈಹಿಕ ಪ್ರಮಾಣ ಪತ್ರ (Original) (Physical Fitness Certificate)
6) ಅಭ್ಯರ್ಥಿಯು ಕಡೆಯದಾಗಿ ಹಾಜರಾಗಿದ್ದ ಶಾಲೆಯ ಮುಖ್ಯೋಪಾಧ್ಯಾಯರು ನೀಡಿರುವ ನಡತೆ ಪ್ರಮಾಣ ಪತ್ರ (Original)

**ಅಭ್ಯರ್ಥಿಯು ಕೆಳಕಂಡ ನಮೂನೆಗಳನ್ನು ಮತ್ತು ಮುಚ್ಚಳಿಕೆಗಳನ್ನು ಕೆಲಸಕ್ಕೆ ಹಾಜರಾಗುವ ಮುನ್ನ ತಪ್ಪದೇ ಬರೆದುಕೊಡತಕ್ಕದ್ದು**

16) ಅಭ್ಯರ್ಥಿಯು ಭಾರತದ ಸಂವಿಧಾನಕ್ಕೆ ಬದ್ದರಾಗಿರುವ ಬಗ್ಗೆ ಪ್ರತಿಜ್ಞಾ ವಿಧಿಯನ್ನು ಇದಕ್ಕೆ ಲಗತ್ತಿಸಿರುವ ನಮೂನೆಯಲ್ಲಿ ಕೆಲಸಕ್ಕೆ ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರಿಗೆ ಬರೆದುಕೊಡತಕ್ಕದ್ದು.

17) ಅಭ್ಯರ್ಥಿಯು ಮದುವೆಯಾಗಿದ್ದಲ್ಲಿ ಒಬ್ಬರೇ ಪತಿ ಅಥವಾ ಪತ್ನಿ ಹೊಂದಿರುವ ಬಗ್ಗೆ ಕೆ.ಸಿ.ಎಸ್. (ನಡತೆ) ನಿಯಮಗಳು 1966 ರಲ್ಲಿನ ನಿಯಮ 28ರ ರೀತ್ಯ ಇದಕ್ಕೆ ಲಗತ್ತಿಸಿರುವ ನಮೂನೆಯಲ್ಲಿರುವ ಘೋಷಣಾ ಪತ್ರವನ್ನು ಕೆಲಸಕ್ಕೆ ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರಿಗೆ ಬರೆದುಕೊಡತಕ್ಕದ್ದು.

18) ಒಂದು ವೇಳೆ ಅಭ್ಯರ್ಥಿಯು ಸಲ್ಲಿಸಿರುವ ಅಂಕಪಟ್ಟಿಗಳು ಮತ್ತು ಮೀಸಲಾತಿ ಪ್ರಮಾಣ ಪತ್ರಗಳು ಹಾಗೂ ಜಾತಿ ಪ್ರಮಾಣ ಪತ್ರಗಳು ಸುಳ್ಳು ಅಥವಾ ನಕಲಿ ಎಂದು ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ಆಯ್ಕೆಯನ್ನು ಮತ್ತು ನೇಮಕಾತಿಯನ್ನು ಶಾಶ್ವತವಾಗಿ ರದ್ದುಪಡಿಸಲಾಗುವುದು ಹಾಗೂ ಅಭ್ಯರ್ಥಿಗಳ ಆಯ್ಕೆಯನ್ನು ಮತ್ತು ನೇಮಕಾತಿಯನ್ನು ಶಾಶ್ವತವಾಗಿ ರದ್ದುಪಡಿಸಲಾಗುವುದು ಹಾಗೂ ಅಭ್ಯರ್ಥಿಯ ವಿರುದ್ಧ ಭಾರತೀಯ ದಂಡ ಸಂಹಿತೆಯಲ್ಲಿನ ಸೂಕ್ತ ಕಲಂಗಳ ಅಡಿಯಲ್ಲಿ ಕ್ರಮ ಕೈಗೊಳ್ಳಲಾಗುವುದು ಹಾಗೂ KCS (CCA) ನಿಯಮಗಳು 1957ರ ಅಡಿಯಲ್ಲಿ ಶಿಸ್ತು ಕ್ರಮ ಕೈಗೊಳ್ಳಲಾಗುವುದು. ಇದಕ್ಕೆ ಬದ್ದನಾಗಿರುತ್ತೇನೆ ಎಂಬ ಬಗ್ಗೆ ಅಭ್ಯರ್ಥಿಯು 20/– ರೂ.ಗಳ ಛಾಪಾ ಕಾಗದದಲ್ಲಿ ಇದಕ್ಕೆ ಲಗತ್ತಿಸಿರುವ ನಮೂನೆಯಲ್ಲಿ ಮುಚ್ಚಳಿಕೆ ನಮೂನೆ–1 ಅನ್ನು ಕೆಲಸಕ್ಕೆ ಹಾಜರಾಗುವ ಮುನ್ನ ಈ ಕಛೇರಿಗೆ ಬರೆದುಕೊಡತಕ್ಕದ್ದು.

19) ಈ ನೇಮಕಾತಿಗಾಗಿ ಅರ್ಜಿ ಸಲ್ಲಿಸಿರುವ ಅಭ್ಯರ್ಥಿಗಳ ಪೈಕಿ ಬೇರೆ ಇನ್ಯಾವುದೇ ಅಭ್ಯರ್ಥಿಯು ಅವರ ಆಯ್ಕೆಯನ್ನು ದಾಖಲೆ ಸಹಿತ establish ಮಾಡಿದಲ್ಲಿ ಅಥವಾ ನನ್ನ ನೇಮಕಾತಿಯು ಅಸಿಂಧುವೆಂದು ದಾಖಲೆಗಳ ಸಹಿತ ಸಾಬೀತು ಪಡಿಸಿದಲ್ಲಿ ನನ್ನ ನೇಮಕಾತಿಯನ್ನು ಯಾವುದೇ ಸೂಚನೆ ಇಲ್ಲದೇ ಶಾಶ್ವತವಾಗಿ ರದ್ದುಗೊಳಿಸಿ ನನ್ನ ಬದಲಿಗೆ ಬೇರೊಬ್ಬರನ್ನು ಆಯ್ಕೆ ಮಾಡಬಹುದು ಎಂಬ ಬಗ್ಗೆ ಅಭ್ಯರ್ಥಿಯು 20/– ರೂ. ಛಾಪಾ ಕಾಗದದಲ್ಲಿ ಇದಕ್ಕೆ ಲಗತ್ತಿಸಿರುವ ನಮೂನೆಯಲ್ಲಿ ಮುಚ್ಚಳಿಕೆ ನಮೂನೆ–2 ಅನ್ನು ಕೆಲಸಕ್ಕೆ ಹಾಜರಾಗುವ ಮುನ್ನ ಈ ಕಛೇರಿಗೆ ಬರೆದುಕೊಡತಕ್ಕದ್ದು.

20) ಸರ್ಕಾರದವರು ಈ ಹಿಂದೆ ಜಾರಿಯಲ್ಲಿದ್ದ ನಿವೃತ್ತಿ ಪಿಂಚಣಿ ಸೌಲಭ್ಯ ಯೋಜನೆಗೆ ಬದಲಾಗಿ ದಿನಾಂಕ:01.04.2006 ರಿಂದ ಜಾರಿಗೆ ಬರುವಂತೆ ಸರ್ಕಾರದ ಆದೇಶ ಸಂಖ್ಯೆ: FD (SPL)-04 PET 2005, ದಿನಾಂಕ:31.03.2006ರ ಆದೇಶದಲ್ಲಿ ಹೊಸದಾಗಿ New defined Contributory Pension Scheme ಎಂಬ ಹೊಸ ಪಿಂಚಣಿ ಯೋಜನೆಯನ್ನು ಜಾರಿಗೆ ತಂದಿರುತ್ತಾರೆ. ಈ ಹೊಸ ಪಿಂಚಣಿ ಯೋಜನೆಯು ದಿನಾಂಕ:01.04.2006 ರಿಂದ ಅಥವಾ ತದನಂತರ ನೇಮಕಾತಿ ಹೊಂದಿದ ಎಲ್ಲಾ ರಾಜ್ಯ ಸರ್ಕಾರಿ ನೌಕರರಿಗೆ ಅನ್ವಯಿಸುತ್ತದೆ ಎಂದು ಆದೇಶ ಮಾಡಿರುತ್ತಾರೆ. ಆದ್ದರಿಂದ ಈ ಜಿಲ್ಲೆಯಲ್ಲಿ ನೇಮಕ ಹೊಂದಿದ ಸದರಿ ನೌಕರರು ದಿನಾಂಕ:31.03.2006ರ ಸದರಿ ಸರ್ಕಾರದ ಆದೇಶದನ್ವಯ ಹೊಸ ಪಿಂಚಣಿ ಯೋಜನೆಗೆ ಒಳಪಡುತ್ತಾರೆಂದು ಈ ಮೂಲಕ ಆದೇಶಿಸಿದೆ ಹಾಗೂ ದಿನಾಂಕ:31.03.2006ರ ಸದರಿ ಸರ್ಕಾರದ ಆದೇಶದಲ್ಲಿನ ನಿರ್ದೇಶನಕ್ಕೆ ಸದರಿ ನೌಕರರು ಬದ್ಧರಾಗಿರತಕ್ಕದ್ದು.

ನೇಮಕಾತಿ ಪ್ರಾಧಿಕಾರಿ ಹಾಗೂ
ಜಿಲ್ಲಾ ನೋಂದಣಾಧಿಕಾರಿಗಳು,
ಉಡುಪಿ ಜಿಲ್ಲೆ, ಉಡುಪಿ.

ಪಿ.ಆರ್.804